Vol - 10 July 2011 Issue No. 06 ₹ 5.00/-

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ






# Karnataka Scout & Guide

*News Magazine*

ಶಿಕ್ಷಣ ಹಕ್ಕು ಕಾಯಿದೆ ಅನುಷ್ಠಾನ



ಶ್ರೀ ಬಿ.ಎಸ್. ಯಡಿಯೂರಪ್ಪ



ಸಾರ್ವಜನಿಕ ಶಿಕ್ಷಣ ಇಲಾಖೆ

ಗುಣಾತ್ಮಕ ಶಿಕ್ಷಣಕ್ಕಾಗಿ ಶೈಕ್ಷಣಿಕ ಸಮಾವೇಶ-2011

(ಶಿಕ್ಷಣ ಇಲಾಖೆಯ ಎಲ್ಲಾ ಸ್ತರದ ಅಧಿಕಾರಿಗಳೊಂದಿಗೆ ಬದ್ಧತೆಗಳ ಸಮಾಲೋಚನೆ)

ಸ್ಥಳ : ಶಿಕ್ಷಕರ ಸದನ ಕೆ.ಜಿ. ರಸ್ತೆ, ಬೆಂಗಳೂರು

23 ಮತ್ತು 24 2011



ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ



**Sri Vishweshwara Hegde Kageri, Hon'ble Minster for Primary & Secondry Education, Govt. of Karnataka is seen with Shri Nirbhayanandaji of Sree Ramakrishna Ashram, Bangalore, Sri G. Kumar Naik, I.A.S., Secretary to Govt., Department of Primary & Secondry Education, Sri Tushar Girinath, I.A.S., Commissioner for Public Instruction, Sri Harsha Gupta, I.A.S., State Project Director, Sarva Shikshana Abhiyana, Sri Syed Abdul Rub, K.A.S, Additional Commissioner, Dept. of Public Instruction, Gulbarga & Sri B.V. Kulakarni, K.A.S., Director (Programme) S.S.A at the State Level Conference of Deputy Directors of Public Instruction (Administration & Development) & Block Educational Officers held at Shikshakara Sadana, Bangalore on 23rd & 24th June 2011**

Sri N. Srinivasan, Joint State Secretary(Scout) & Sri M.A. Chellaiah, Headquarters Commissioner (Scout) Presenting Bonquet & Scarf to the Swamiji, Hon'ble Minister, Secretary to Govt. and other officers of the Dept. of Public Instruction at the State Level Conference of DDPI's & BEO's held at Bangalore on 24th June 2011.



**Shri Nirbhayanandaji**
Sri Ramakrishna Ashram, Bangalore

**Sri Vishweshwara Hegde Kageri**
Hon'ble Minister for
Primary & Secondary Education

**Sri G. Kumar Naik, I.A.S.,**
Secretary to Govt.
Primary & Secondary Education



**Sri Tushar Girinath, I.A.S.,**
Commissioner for Public Instruction

**Sri Harsha Gupta, I.A.S.,**
State Project Director,
Sarva Shikshana Abhiyana

**Sri Syed Abdul Rub, K.A.S.,**
Additional Commissioner
for Public Instruction, Gulbarga

**Sri V.A. Machakanur, K.A.S.,**
Additional Commissioner
for Public Instruction, Dharwad



View of the Delegates at the Conference of DDPI's & BEO's held at Shikshakara Sadana, Bangalore on 23rd & 24th June 2011

# Editor's desk



Dear friends

For the past few days, we have been marking our presence on the International Scouting / Guiding arena, which is indeed a proud moment for all of us in Bharat Scouts & Guides (Karnataka).

To start with we had Sonia M.Singh a promising Guide, representing our Country at the Young women forum in Mexico, making the Bharat Scouts & Guides proud. Thereafter we had 3 Guide Leaders namely Vanita Narayan, Sister Cyntia, Gayathri Singh and an Young Leader Bridget representing our Country at the 34th WAGGS World Conference in Scotland.

Now as many as 23 Scouts and 12 Scout Leader in the capacity of Members of International Service Team have left to attend the World Jamboree at Sweden. As iceing on the cake, we had our State Secretary, M.A.Khalid receiving the coveted "Green Jade Lions Award" from the Scouts Association of China during their Centenary Jamboree in Taiwan.

We in Karnataka are almost completing the tenure and its time for stock taking. Yes indeed, there have been many laurels and the scouting & Guiding has made a very desirable impact and in addition the benign Government has been very kind in giving us adequate grants. We have done a lot, but a lot more has to be done. If we look at the catchment area of potential Scouts & Guides, we have reached a very negligible percentage. The Scout/ Guide leaders and the professionals shoud putin more efforts to reach more young people for future growth of our movement.

Looking forward for qualitative & quantitative Scouting / Guiding.

M.A. KHALID
Editor

# ಮುಖ್ಯ ಆಯುಕ್ತರ ನುಡಿ.......



ಬಂಧುಗಳೇ,

ದಿನಾಂಕ 21, 22 ಮತ್ತು 23 ಜೂನ್ 2011ರಂದು ಡಾ|| ಅನಿಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ತರಬೇತಿ ತಂಡದ ಸಮಾವೇಶ ನಡೆಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ ತರಬೇತಿ ತಂಡದ ಸದಸ್ಯರುಗಳು ರಾಜ್ಯ ಸ್ಕೌಟ್ ಆಯುಕ್ತ ಶ್ರೀ ಟಿ.ಎಸ್. ಲೂಕಾಸ್‌ರವರ ನಾಯಕತ್ವದಲ್ಲಿ ತರಬೇತಿಗೆ ಸಂಬಂಧಪಟ್ಟ ವಿವಿಧ ವಿಷಯಗಳ ಬಗ್ಗೆ ಉಪಯುಕ್ತ ಚರ್ಚೆ ನಡೆಸಿ ಮಾಹಿತಿ ಪಡೆದರು. ಇದೇ ಸಂದರ್ಭದಲ್ಲಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳು, ಜಿಲ್ಲಾ ಸಂಘಟಕರುಗಳು ಮತ್ತು ಜಿಲ್ಲಾ ತರಬೇತಿ ಆಯುಕ್ತರುಗಳ ಸಮಾವೇಶವು ನಡೆದು ಜಿಲ್ಲೆಗಳ ಪ್ರಗತಿಯ ಬಗ್ಗೆ ಕೂಲಂಕಷ ಚರ್ಚೆ ನಡೆಸಲಾಯಿತು. ದಿನಾಂಕ: 23.06.2011 ರಂದು ನಾನು ಈ ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳೊಡನೆ ಸಂವಾದ ನಡೆಸಿದೆ. ತರಬೇತಿ ತಂಡದ ಸದಸ್ಯರು, ಜಿಲ್ಲಾ ತರಬೇತಿ ಆಯುಕ್ತರುಗಳು, ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳು ತಮ್ಮ ಜಿಲ್ಲೆಗಳಲ್ಲಿ ಸ್ಕೌಟ್/ ಗೈಡ್‌ಗಳ ಗುಣಮಟ್ಟವನ್ನು ಹೆಚ್ಚಿಸಲು ಎಲ್ಲಾ ರೀತಿಯ ಪ್ರಯತ್ನ ಮಾಡಬೇಕೆಂದು ಕೋರಿದ್ದೇನೆ. ಪ್ರತಿ ಜಿಲ್ಲೆಯಲ್ಲಿರುವ, ಪ್ರತಿ ಶಾಖೆಯಲ್ಲಿ ತಲಾ ಕನಿಷ್ಠ ಇಬ್ಬರು ಎ.ಎಲ್.ಟಿ. ಹಾಗೂ ಒಬ್ಬರು ಎಲ್.ಟಿ. ಇರುವಂತೆ ತಾವುಗಳು ಪ್ರಯತ್ನ ಮಾಡಬೇಕೆಂದು ಕೋರುತ್ತೇನೆ.

ಸರ್ವಶಿಕ್ಷಣ ಅಭಿಯಾನ ಮತ್ತು ಸಾರ್ವಜನಿಕ ಶಿಕ್ಷಣ ಶಾಖೆಗಳ ಮುಖ್ಯಸ್ಥರುಗಳ ಸಹಿಉಳ್ಳ ಸುತ್ತೋಲೆಯು ಈಗಾಗಲೇ ತಮಗೆ ತಲುಪಿದೆ ಎಂದು ಭಾವಿಸುತ್ತೇನೆ. ಅದರಲ್ಲಿ ತಿಳಿಸಿರುವಂತೆ ಎಲ್ಲಾ ಶಾಲೆಗಳಲ್ಲಿ ಸ್ಕೌಟ್/ಗೈಡ್ ಘಟಕಗಳನ್ನು ಪ್ರಾರಂಭಿಸುವ ನಿಟ್ಟಿನಲ್ಲಿ ಜಿಲ್ಲೆಯ ಪದಾಧಿಕಾರಿಗಳು ಪ್ರಯತ್ನಶೀಲರಾಗಬೇಕೆಂದು ಕೋರುತ್ತೇನೆ. ಈ ಕಾರ್ಯದಲ್ಲಿ ಜಿಲ್ಲಾ ಉಪನಿರ್ದೇಶಕರುಗಳು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಹಕಾರ ಪಡೆದು ಕಾರ್ಯಪ್ರವೃತ್ತರಾಗಲು ವಿನಂತಿ.

ಹಿಂದಿನ ಎರಡು ವರ್ಷಗಳಿಂದ ಸರ್ವ ಶಿಕ್ಷಣ ಅಭಿಯಾನದಡಿಯಲ್ಲಿ DIETಗಳ ಮುಖಾಂತರ ಶಿಕ್ಷಕ ಶಿಕ್ಷಕಿಯರಿಗೆ ಮೂಲ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿತ್ತು. ಈ ತರಬೇತಿ ಶಿಬಿರಗಳನ್ನು ನಡೆಸಲು ನೆರವಾದ ಸರ್ವ ಶಿಕ್ಷಣ ಅಭಿಯಾನದ ರಾಜ್ಯ ಯೋಜನಾ ನಿರ್ದೇಶಕರಿಗೆ ಅಲ್ಲಿಯ ಅಧಿಕಾರಿವರ್ಗ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು ಹಾಗೂ ಅಧಿಕಾರಿಗಳಿಗೆ ಜಿಲ್ಲಾ ಉಪನಿರ್ದೇಶಕರುಗಳಿಗೆ, ಡಯಟ್ ಪ್ರಾಂಶುಪಾಲಕರಿಗೆ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಸಂಸ್ಥೆಯ ಕೃತಜ್ಞತೆಗಳು. ಈ ವರ್ಷವೂ ಸಹ ಇದಕ್ಕೆ ಸಂಬಂಧಪಟ್ಟ ಸುತ್ತೋಲೆಯು ಸದ್ಯದಲ್ಲಿಯೇ ಹೊರಬೀಳಲಿದೆ. ಈ ಸುತ್ತೋಲೆಯನ್ನು ಎಲ್ಲಾ ಜಿಲ್ಲೆಗಳಿಗೆ ಕಳುಹಿಸಲಾಗುವುದು. ಅದರಂತೆ ಕ್ರಮ ಕೈಗೊಂಡು ತರಬೇತಿ ಶಿಬಿರಗಳನ್ನು ನಡೆಸುವಂತೆ ತಮ್ಮನ್ನು ಕೋರುತ್ತೇನೆ.

ದಿನಾಂಕ:23.06.2011 ಮತ್ತು 24.06.2011ರಂದು ಶಿಕ್ಷಕರ ಸದನದಲ್ಲಿ ಶೈಕ್ಷಣಿಕ ಸಮಾವೇಶ ನಡೆದ ಸಂದರ್ಭದಲ್ಲಿ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು ಕರ್ನಾಟಕ ಸರ್ಕಾರ, ಶ್ರೀ ನಿರ್ಭಯಾನಂದ ಸ್ವಾಮೀಜಿ ಶ್ರೀ ರಾಮಕೃಷ್ಣ ಆಶ್ರಮ, ಬೆಂಗಳೂರು, ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು, ಆಯುಕ್ತರು, ಅಪರ ಆಯುಕ್ತರುಗಳು, ನಿರ್ದೇಶಕರುಗಳು, ಸಹನಿರ್ದೇಶಕರುಗಳು, ಉಪನಿರ್ದೇಶಕರುಗಳು ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳು ಪಾಲ್ಗೊಂಡಿದ್ದರು.

ಈ ಸಂದರ್ಭದಲ್ಲಿ ರಾಜ್ಯ ಜಂಟಿ ಕಾರ್ಯದರ್ಶಿ(ಸ್ಕೌಟ್ಸ್) ಶ್ರೀ ಎನ್. ಶ್ರೀನಿವಾಸನ್ ಮತ್ತು ಕೇಂದ್ರ ಸ್ಥಾನಿಕ ಆಯುಕ್ತ, ಶ್ರೀ ಎಂ.ಎ. ಚೆಲ್ಲಯ್ಯನವರು ಮಾನ್ಯ ಸಚಿವರಿಗೆ, ಸ್ವಾಮೀಜಿಯವರಿಗೆ ಹಾಗೂ ಇಲಾಖೆಯ

ಅಧಿಕಾರಿವರ್ಗದವರಿಗೆ ಕಂಠವಸ್ತ್ರ ತೊಡಿಸಿ ಫಲ ಪುಷ್ಪಗಳನ್ನು ನೀಡಿ ಗೌರವಿಸಿದರು. ರಾಜ್ಯದಲ್ಲಿ ಸ್ಕೌಟ್-ಗೈಡ್ ಕಾರ್ಯಕ್ರಮವನ್ನು ವಿಸ್ತರಿಸಲು ಎಲ್ಲರ ಸಹಕಾರವನ್ನು ಈ ಸಂದರ್ಭದಲ್ಲಿ ಕೋರಲಾಯಿತು.

ನಮ್ಮ ಎಲ್ಲಾ ಕಾರ್ಯಕ್ರಮಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆ ಎಲ್ಲಾ ರೀತಿಯ ಸಹಕಾರ ನೀಡುತ್ತಾ ಬಂದಿದೆ. ಇಲಾಖೆಯ ಪ್ರಮುಖ ಸುದ್ದಿಮಾಧ್ಯಮವಾಗಿರುವ "ಶಿಕ್ಷಣ ವಾರ್ತೆ" ಪತ್ರಿಕೆಯಲ್ಲಿ ನಮಗೆ ಸಂಬಂದಪಟ್ಟ ಸುತ್ತೋಲೆಗಳನ್ನು ಮತ್ತು ನಮ್ಮ ಕಾರ್ಯಕ್ರಮದ ಛಾಯಾ ಚಿತ್ರಗಳನ್ನು ಪ್ರಕಟಿಸಲಾಗಿದೆ. ಇದಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ನನ್ನ ಕೃತಜ್ಞತೆಗಳು.

ಹಿಂದಿನ ಸಂಚಿಕೆಯಲ್ಲಿ ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ ಸ್ಕೌಟ್/ಗೈಡ್ ಚಟುವಟಿಕೆಗಳಿಗೆ ಅನುದಾನ ನೀಡುವ ವಿಷಯದಲ್ಲಿ ಸುತ್ತೋಲೆ ಹೊರಡುವ ಬಗ್ಗೆ ಬರೆದಿದ್ದೆ. ಆ ಸುತ್ತೋಲೆಯೂ ಈಗ ಹೊರಬಿದ್ದಿದ್ದು, ಅದನ್ನು ಈ ಸಂಚಿಕೆಯಲ್ಲಿ ಮುದ್ರಿಸಲಾಗಿದೆ. ಪ್ರತಿ ಜಿಲ್ಲಾ ಪಂಚಾಯತ್‌ನಿಂದ ರೂ. 25,000/- ಪ್ರತಿ ತಾಲ್ಲೂಕ್ ಪಂಚಾಯತಿಯಿಂದ ರೂ. 5,000/- ಮತ್ತು ಪ್ರತಿ ಗ್ರಾಮಪಂಚಾಯಿತಿಯಿಂದ ರೂ. 2000/-ಗಳ ಅನುದಾನವನ್ನು ಸ್ಕೌಟ್/ಗೈಡ್ ಚಟುವಟಿಕೆಗಳಿಗೆ, ರ್‍ಯಾಲಿಗಳಿಗೆ, ಸಮವಸ್ತ್ರಗಳಿಗೆ ನೀಡುವಂತೆ ಸುತ್ತೋಲೆಯಲ್ಲಿ ಸೂಚಿಸಲಾಗಿದೆ. ಈ ಸುತ್ತೋಲೆಯ ಪ್ರತಿಗಳನ್ನು ಪ್ರತಿ ಜಿಲ್ಲೆಗೆ ಕಳುಹಿಸಲಾಗುವುದು. ಜಿಲ್ಲಾ ಸಂಸ್ಥೆಯವರು, ಸ್ಥಳೀಯ ಸಂಸ್ಥೆಯವರು ಮತ್ತು ಗ್ರಾಮ ಮಟ್ಟದ ದಳಗಳು ಇದರ ಸಂಪೂರ್ಣ ಸದುಪಯೋಗ ಪಡೆಯಬೇಕೆಂದು ವಿನಂತಿಸುತ್ತೇನೆ.

ಈ ಆದೇಶ ನೀಡಿದಕ್ಕಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಅಧೀನ ಕಾರ್ಯದರ್ಶಿಗಳು, ನಿರ್ದೇಶಕರು, ಆಂತರಿಕ ಆರ್ಥಿಕ ಸಲಹೆಗಾರರು ಮತ್ತು ಎಲ್ಲಾ ಅಧಿಕಾರಿ ವರ್ಗದವರಿಗೆ ರಾಜ್ಯದ ಸ್ಕೌಟ್/ಗೈಡ್‌ಗಳ ಪರವಾಗಿ, ಘಟಕ ನಾಯಕರುಗಳ ಪರವಾಗಿ ಮತ್ತೊಮ್ಮೆ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ.

ದಾವಣಗೆರೆಯ ನೇತಾಜಿ ಮುಕ್ತ ಸ್ಕೌಟ್ ದಳವು 2009-10ನೇ ಸಾಲಿನ ಪ್ರಧಾನ ಮಂತ್ರಿ ಪಾರಿತೋಷಕ ಸ್ಪರ್ಧೆಯ ಪ್ರಮಾಣ ಪತ್ರಕ್ಕಾಗಿ ಆಯ್ಕೆಯಾಗಿರುವುದು ಸಂತಸದ ವಿಷಯ. ದಳದ ಗುಂಪಿನ ನಾಯಕ ಮತ್ತು ದಳದ ಸದಸ್ಯರುಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಈ ಯಶಸ್ಸು ರಾಜ್ಯದ ಇತರೆ ದಳಗಳಿಗೆ ಮಾದರಿಯಾಗಲೆಂದು ಆಶಿಸುತ್ತೇನೆ.

ಸ್ವೀಡನ್ನಿನಲ್ಲಿ 25 ಜುಲೈ 2011 ರಿಂದ 07 ಆಗಸ್ಟ್ 2011ರವರೆಗೆ ನಡೆಯಲಿರುವ 22ನೇ ವಿಶ್ವ ಸ್ಕೌಟ್ ಜಾಂಬೋರಿಯಲ್ಲಿ ಕರ್ನಾಟಕದಿಂದ 37 ಮಂದಿ ಸ್ಕೌಟ್/ಗೈಡ್‌ಗಳು, ದಳನಾಯಕರು ಮತ್ತು ಸೇವಾ ಸಿಬ್ಬಂದಿ ಭಾಗವಹಿಸಲಿದ್ದಾರೆ. ದಿನಾಂಕ 23.07.2011ರಂದು ಇವರಿಗೆ ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಬೀಳ್ಕೊಡಿಗೆ ಸಮಾರಂಭವನ್ನು ಏರ್ಪಡಿಸಿ ಸುಖಕರ ಪ್ರಯಾಣ ಕೋರಲಾಯಿತು. ಈ ತಂಡದಲ್ಲಿ ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ದಾವಣಗೆರೆ, ಮಂಡ್ಯ, ಮೈಸೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳ ಪ್ರತಿನಿಧಿಗಳಿದ್ದಾರೆ.

ಘಟಕನಾಯಕರುಗಳು, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ರಾಜ್ಯ ಸಂಸ್ಥೆಯ ಪದಾಧಿಕಾರಿಗಳು, ಎಲ್ಲರೂ ಸ್ಕೌಟ್/ಗೈಡ್ ಚಳುವಳಿಯನ್ನು ವ್ಯಾಪಕವಾಗಿ ಹರಡಲು ಕೈಜೋಡಿಸೋಣ ಎಂದು ಆಶೀಸುತ್ತೇನೆ.

ಸರ್ವಶಕ್ತನಾದ ಭಗವಂತನು ನಮ್ಮ ಈ ಸದಾಶಯಯುಕ್ತವಾದ ಪ್ರಯತ್ನದಲ್ಲಿ ಯಶಸ್ಸು ಸಿಗುವಂತೆ ಆಶೀರ್ವದಿಸಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬಿ. ಷಣ್ಮುಖಪ್ಪ



**ಕರ್ನಾಟಕ ಸರ್ಕಾರ**

ನಂ. ಗ್ರಾಅಪ: 35:ತಾಪಸ:2011

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ:14-07-2011

**ಸುತ್ತೋಲೆ**

ವಿಷಯ :- ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ರಾಜ್ಯದ ಪ್ರತಿ ಜಿಲ್ಲೆಗಳಲ್ಲಿ ಪ್ರತಿ ತಾಲ್ಲೂಕು ಹಾಗೂ ಗ್ರಾಮಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಶಾಲಾ ಮಕ್ಕಳಿಗಾಗಿ ನಡೆಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

ಉಲ್ಲೇಖ :- 1. ಸುತ್ತೋಲೆ ಸಂಖ್ಯೆ:ಗ್ರಾಅಪ:126:ತಾಪಸ:1996 ದಿ: 25-05-1996
2.ರಾಜ್ಯ ಮುಖ್ಯ ಆಯುಕ್ತರು, ದಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಬೆಂಗಳೂರು ಇವರ ಪತ್ರ ಸಂಖ್ಯೆ: BSG/SHQ/654 /2010-11 ದಿನಾಂಕ:17-03-2011

****

ದಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಉಲ್ಲೇಖ (1)ರ ಸರ್ಕಾರದ ಸುತ್ತೋಲೆಯಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪರಿಚ್ಛೇದ 191(2)(ಬಿ)(ಸಿ) ಯಡಿಯಲ್ಲಿ ಜಿಲ್ಲಾ ಪಂಚಾಯತಿಗಳು ಇಂತಹ ಕಾರ್ಯಕ್ರಮಗಳಿಗೆ ವಂತಿಕೆ ನೀಡಲು ಅವಕಾಶ ಕಲ್ಪಿಸಿದೆ. ಭಾರತ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಒಂದು ಸ್ವಾಯತ್ತ ಸಂಸ್ಥೆಯಾಗಿರುವುದರಿಂದ, ಅವರ ಕೋರಿಕೆಯನ್ನು ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳುವಂತೆ ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ತಿಳಿಸಲಾಗಿದೆ.

ಉಲ್ಲೇಖ(2)ರ ಪತ್ರದಲ್ಲಿ ಸದರಿ ಸಂಸ್ಥೆಯು ರಾಜ್ಯದ ಪ್ರತಿ ಜಿಲ್ಲೆಗಳಲ್ಲಿ ಹಾಗೂ ಪ್ರತಿ ತಾಲ್ಲೂಕುಗಳಲ್ಲಿ ಹಾಗೂ ಗ್ರಾಮಗಳಲ್ಲಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ಶಾಲಾ ಮಕ್ಕಳಿಗಾಗಿ ವ್ಯಾಪಕವಾಗಿ ಹೆಚ್ಚಿಸಲು ಅನುಕೂಲವಾಗುವಂತೆ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್ ಗಳಿಂದ ₹.5.00 ಲಕ್ಷಗಳ ಹಾಗೂ ಪ್ರತಿ ತಾಲ್ಲೂಕು ಪಂಚಾಯತ್ ಗಳಿಂದ ₹.1.00 ಲಕ್ಷಗಳನ್ನು ಆಯಾ ಜಿಲ್ಲೆಗಳ ಜಿಲ್ಲಾ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ಹಾಗೂ ತಾಲ್ಲೂಕಿನಲ್ಲಿರುವ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಗಳಿಗೆ ಚಳುವಳಿಯ ಉದ್ದೇಶಿತ ರ್‍ಯಾಲಿಗಳು , ವಾರ್ಷಿಕ ಕಾರ್ಯ ಚಟುವಟಿಕೆಗಳು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರ ನೀಡುವ ಉದ್ದೇಶಕ್ಕಾಗಿ ಅನುದಾನ ನೀಡುವಂತೆ ಕೋರಿರುತ್ತಾರೆ.

ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆಗಳಿಗೆ ಶಾಲಾ ಮಕ್ಕಳಿಗಾಗಿ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ವ್ಯಾಪಕವಾಗಿ ಹೆಚ್ಚಿಸಲು ಅನುಕೂಲವಾಗುವಂತೆ ಹಾಗೂ ಚಳುವಳಿಯ ಉದ್ದೇಶಿತ ರ್‍ಯಾಲಿಗಳು , ವಾರ್ಷಿಕ ಕಾರ್ಯ ಚಟುವಟಿಕೆಗಳು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರ ನೀಡುವ ಉದ್ದೇಶಕ್ಕಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳು ತಮ್ಮ ಜಿಲ್ಲಾ ಪಂಚಾಯತ್‌ಗಳ ಸ್ವಂತ

ಸಂಪನ್ಮೂಲಗಳಿಂದ ₹.25,000/- ( ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಗಳನ್ನು , ತಾಲ್ಲೂಕು ಪಂಚಾಯತಿಗಳು ತಮ್ಮ ಸ್ವಂತ ಸಂಪನ್ಮೂಲಗಳಿಂದ ₹. 5000/- ( ಐದು ಸಾವಿರ ರೂ.ಗಳು ಮಾತ್ರ) ಗಳನ್ನು , ಗ್ರಾಮ ಪಂಚಾಯತಿಗಳು ತಮ್ಮ ಸ್ವಂತ ಸಂಪನ್ಮೂಲಗಳಿಂದ ₹. 2000/- (ಎರಡುಸಾವಿರ ರೂ.ಗಳು ಮಾತ್ರ) ಗಳನ್ನು 2011-12ನೇ ಸಾಲಿಗೆ ಮಾತ್ರ ಕರ್ನಾಟಕ ಪಂಚಾಯತ್ ರಾಜ್, ಅಧಿನಿಯಮ 1993ರ ಪ್ರಕರಣ 191,213(2) (III) ಮತ್ತು 219(1)(2) ರನ್ವಯ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳ ವತಿಯಿಂದ ಕ್ರಮವಾಗಿ ಆಯಾ ಜಿಲ್ಲೆಗಳ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ಹಾಗೂ ತಾಲ್ಲೂಕಿನಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳಿಗೆ ವಾರ್ಷಿಕ ವಂತಿಕೆಯನ್ನು ನೀಡುವಂತೆ ಸೂಚಿಸಿದೆ.

(ಸ್ವರ್ಣಲತ. ಎಂ. ಭಂಡಾರಿ) 1/7/11
ಸರ್ಕಾರದ ಅಧೀನ ಕಾರ್ಯದರ್ಶಿ(ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾ ಜ್ ಇಲಾಖೆ

1) ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು
2) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್
3) ಗ್ರಾಮ ಪಂಚಾಯತ್ ಕಾರ್ಯದರ್ಶಿಗಳಿಗೆ (ಸಂಬಂಧಪಟ್ಟ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮುಖಾಂತರ)
4) ಶ್ರೀ ಕೊಂಡಜ್ಜಿ, ಬಿ. ಶಣ್ಮುಖಪ್ಪ, ಸ್ಟೇಟ್ ಚೀಫ್ ಕಮಿಷನರ್, ದಿ ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ಕರ್ನಾಟಕ, ಕೊಂಡಜ್ಜಿ ಬಸಪ್ಪ ರೋಡ್, ಕೋಟೆ, ಬೆಂಗಳೂರು-2.

## ರಾಜ್ಯ ಮಟ್ಟದ ತರಬೇತಿ ತಂಡದ ಸಮಾವೇಶ

ದಿನಾಂಕ 21, 22 ಮತ್ತು 23 ಜೂನ್ 2011ರಂದು ಡಾ|| ಅನಿಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರದಲ್ಲಿ ತರಬೇತಿ ತಂಡದ ಸಮಾವೇಶ ನಡೆಯಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ ಸುಮಾರು 125 ತರಬೇತಿ ತಂಡದ ಸದಸ್ಯರುಗಳು ರಾಜ್ಯ ಸ್ಕೌಟ್ ಆಯುಕ್ತ ಶ್ರೀ ಟಿ.ಎಸ್. ಲೂಕಾಸ್‌ರವರ ನಾಯಕತ್ವದಲ್ಲಿ ತರಬೇತಿಗೆ ಸಂಬಂಧಪಟ್ಟ ವಿವಿಧ ವಿಷಯಗಳ ಬಗ್ಗೆ ಉಪಯುಕ್ತ ಚರ್ಚೆ ನಡೆಸಿ ಮಾಹಿತಿ ಪಡೆದರು. ಇದೇ ಸಂದರ್ಭದಲ್ಲಿ ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳು, ಜಿಲ್ಲಾ ಸಂಘಟಕರುಗಳು ಮತ್ತು ಜಿಲ್ಲಾ ತರಬೇತಿ ಆಯುಕ್ತರುಗಳ ಸಮಾವೇಶವು ನಡೆದು ಜಿಲ್ಲೆಗಳ ಪ್ರಗತಿಯ ಬಗ್ಗೆ ಕೂಲಂಕಷ ಚರ್ಚೆ ನಡೆಸಲಾಯಿತು.

## ಗುಣಾತ್ಮಕ ಶಿಕ್ಷಣಕ್ಕಾಗಿ ಶೈಕ್ಷಣಿಕ ಸಮಾವೇಶ - 2011

ದಿನಾಂಕ : ೨೩-೦೬-೨೦೧೧ ಮತ್ತು ೨೪-೦೬-೨೦೧೧ ರಂದು ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿರುವ ಶಿಕ್ಷಕರ ಸದನದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸರ್ವ ಶಿಕ್ಷಣ ಅಭಿಯಾನದ ವತಿಯಿಂದ ರಾಜ್ಯ ಮಟ್ಟದ ಶೈಕ್ಷಣಿಕ ಸಮಾವೇಶ ಜರುಗಿತು. ಕರ್ನಾಟಕ ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು, ಆಯುಕ್ತರು, ಸರ್ವಶಿಕ್ಷಣ ಅಭಿಯಾನದ ರಾಜ್ಯ ಯೋಜನಾ ನಿರ್ದೇಶಕರು, ಅಪರ ಆಯುಕ್ತರುಗಳು, ಸಹ-ನಿರ್ದೇಶಕರುಗಳು, ಉಪ-ನಿರ್ದೇಶಕರುಗಳು ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳು ಈ ಸಮಾವೇಶದಲ್ಲಿ ಭಾಗವಹಿಸಿ ಶಿಕ್ಷಣದ ಪ್ರಗತಿಯ ಬಗ್ಗೆ ವಿಚಾರ ವಿನಿಮಯ ನಡೆಸಲಾಯಿತು. ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ. ಶ್ರೀ ನಿರ್ಭಯಾನಂದ ಸ್ವಾಮಿ ಶ್ರೀ ರಾಮಕೃಷ್ಣ ಆಶ್ರಮ ಅವರುಗಳು ಸಮಾವೇಶದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದರು.

ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌಟ್ಸ್) ಆದ ಶ್ರೀ ಎನ್. ಶ್ರೀನಿವಾಸನ್, ಮತ್ತು ಕೇಂದ್ರ ಸ್ಥಾನಿಕ ಆಯುಕ್ತರು ಶ್ರೀ ಎಂ.ಎ. ಚೆಲ್ಲಯ್ಯರವರು ಈ ಸಂದರ್ಭದಲ್ಲಿ ಮಾನ್ಯ ಸಚಿವರು, ಸ್ವಾಮೀಜಿಯವರು, ಸಾರ್ವಜನಿಕ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು, ಆಯುಕ್ತರುಗಳು ಹಾಗೂ ಇತರ ಉನ್ನತ ಅಧಿಕಾರಿಗಳಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಪರವಾಗಿ ಕಂಠವಸ್ತ್ರ ತೊಡಿಸಿ, ಫಲಪುಷ್ಪ ನೀಡಿ ಗೌರವಿಸಿದರು. ಸ್ಕೌಟ್ ಮತ್ತು ಗೈಡ್ ಕಾರ್ಯಕ್ರಮವನ್ನು ಎಲ್ಲಾ ಶಾಲೆಗಳಲ್ಲಿ ವಿಸ್ತರಿಸಲು ಮಾನ್ಯ ಸಚಿವರ ಹಾಗೂ ಅಧಿಕಾರಿಗಳ ಸಹಕಾರ ಮತ್ತು ಬೆಂಬಲ ಕೋರಲಾಯಿತು.

## 22nd World Scout Jamboree Sweden

The 22nd World Scout Jamboree will be held from 25th July 2011 to 7th August 2011 at Rinkaby, Kristianstad, Sweden. A contingent of 37 Members representing Bangalore South, Bangalore North, Dakshina Kannada, Davanagere, Mandya, Mysore, Shimoga and Tumkur District will participate in the Event.

A get together was organised on 23rd June 2011 at State Headquarter, Banlgaore, for the participants.




# ಸರ್ವ ಶಿಕ್ಷಣ ಅಭಿಯಾನ ಸುತ್ತೋಲೆಯ ಭಾಗ

ಸಂಖ್ಯೆ: ಸ.ಶಿ.ಅ./ಹೆ.ಶಿ./ಕೆ.ಜಿ.ಬಿ.ವಿ./ಮಾರ್ಗಸೂಚಿ/2011-12 ದಿನಾಂಕ : 06-06-2011

## ಸುತ್ತೋಲೆ

ವಿಷಯ : ಕಸ್ತೂರ ಬಾ ಗಾಂಧಿ ಬಾಲಿಕ ವಿದ್ಯಾಲಯಗಳ ಕಾರ್ಯಚಟುವಟಿಕೆ ಕುರಿತು **2011-12** ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಮಾರ್ಗಸೂಚಿ

ಉಲ್ಲೇಖ : ದಿನಾಂಕ **28-02-2011** ರಂದು ನವದೆಹಲಿಯಲ್ಲಿ ನಡೆದ ಸರ್ವಶಿಕ್ಷಣ ಅಭಿಯಾನ ಯೋಜನಾ ಅನುಮೋದನಾ ಮಂಡಲಿ ಸಭೆ

---

---

15) ಎಲ್ಲಾ ಕೆ.ಜಿ.ಬಿ.ವಿ.ಗಳಲ್ಲಿ ಕಡ್ಡಾಯವಾಗಿ ಗೈಡ್ಸ್ ಮತ್ತು ಸೇವಾದಳ ಘಟಕಗಳನ್ನು ಸ್ಥಾಪಿಸುವುದು. ಇದಕ್ಕಾಗಿ ಸಂಬಂಧಿಸಿದ ಜಿಲ್ಲಾ ಘಟಕಗಳನ್ನು ಸಂಪರ್ಕಿಸುವುದು. ಈ ಘಟಕಗಳ ಸ್ಥಾಪನೆಗೆ ಸಂಬಂಧಿಸಿದ ನೋಂದಣಿ ಶುಲ್ಕವನ್ನು ಕೆ.ಜಿ.ಬಿ.ವಿ.ಯ 'ನಿರ್ವಹಣೆ ಒಳಗೊಂಡಂತೆ ಇತರೆ ವೆಚ್ಚ' ಶೀರ್ಷಿಕೆಯಡಿ ಭರಿಸಲು ಸೂಚಿಸಿದೆ. ಕೆ.ಜಿ.ಬಿ.ವಿ.ಯ ಒಬ್ಬ ಶಿಕ್ಷಕರನ್ನು ಈ ಘಟಕಗಳ ಉಸ್ತುವಾರಿಗೆ ನೇಮಿಸುವುದು. ಈ ಶಿಕ್ಷಕರ ತರಬೇತಿಗೆ ಸಂಬಂಧಿಸಿದ ಅನುದಾನವನ್ನು ಶಿಕ್ಷಕರ ತರಬೇತಿಯಲ್ಲಿ ಭರಿಸಲು ಡಯಟ್‌ಗಳಿಗೆ ಸೂಚಿಸಿದೆ.

ನಿರ್ದೇಶಕರು (ಕಾರ್ಯಕ್ರಮಗಳು)
ಸರ್ವ ಶಿಕ್ಷಣ ಅಭಿಯಾನ

# The General Association Scouts of China Award Presented to Sri M.A. Khalid

The General Association Scouts of China presented a Certificate of Green Jade Lion Award to Sri M.A Khalid, State Secretary, The Bharat Scouts and Guides, Karnataka and the consultant APR Scout Committee for the Valuable Contribution to the development of APR Scouting and the enrichment of International Brotherhood on 12th July 2011 at Taiwan by His Excellency Wu Den-Yih, Hon'ble Prime Minister of Republic of China.

# ಜಿಲ್ಲಾ ವಾರ್ತೆಗಳು

## ಶಿವಮೊಗ್ಗ

ದಿನಾಂಕ 08-07-2011 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್/ಗೈಡ್ಸ್, ಶಿಕ್ಷಕ/ಶಿಕ್ಷಕಿಯರ ಸಮಾವೇಶ ನಡೆಯಿತು ಜಿಲ್ಲೆಯ ಒಂದು ನೂರಕ್ಕೂ ಹೆಚ್ಚು ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು. ವಾರ್ಷಿಕ ಯೋಜನೆ ತಯಾರಿಕೆ, ಧ್ವಜಾರೋಹಣ ಕ್ರಮ ಚಳುವಳಿಯ ಮೂಲತತ್ವಗಳು. ಇತ್ಯಾದಿಗಳನ್ನು ಗುಂಪುಚರ್ಚೆ, ಪ್ರಾತ್ಯಕ್ಷಿಕೆ ಮೂಲಕ ತಿಳಿಸಲಾಯಿತು.

ಶಿಬಿರದ ನಾಯಕತ್ವನ್ನು ಜಿಲ್ಲಾ ತರಬೇತಿ ಆಯುಕ್ತರಾದ (ಸ್ಕೌ) ಎಂ.ಜಿ. ಶಿವಕುಮಾರ್, ವಹಿಸಿದ್ದರು. ಸಹಾಯಕರಾಗಿ, ಶ್ರಿ ಬಿ.ಎಂ. ಜಯಾಚಾರ್, ಜಿಲ್ಲಾ ಸಂಘಟನಾ ಆಯುಕ್ತರು ಮತ್ತು ಶ್ರಿಮತಿ ಎಸ್. ದೀಪಶ್ರೀ ಜಿಲ್ಲಾ ಸಂಘಟಕರು ಕೆಲಸ ನಿರ್ವಹಿಸಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಮುಕ್ತಾಯ ಸಮಾರಂಭ ನಡೆಯಿತು. ಶ್ರೀ ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಸ್ಕೌಟ್ ಆಯುಕ್ತರು ಮುಖ್ಯ ಅತಿಥಿಗಳಾಗಿ ಸಭೆಯನ್ನು ಉದ್ದೇಶಿಸಿ ಸ್ಕೌಟ್ಸ್/ಗೈಡ್ಸ್ ಮಹತ್ವವನ್ನು ತಿಳಿಸಿದರು. ಈ ಸಂದರ್ಭದಲ್ಲಿ ಕೆಲವು ಸ್ಕೌಟ್/ಗೈಡ್ ಶಿಕ್ಷಕರಿಗೆ ವಾರೆಂಟನ್ನು ಪ್ರಧಾನ ಮಾಡಿ ಪ್ರತಿಜ್ಞೆಯನ್ನು ಬೋಧಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿಗಳು ಮಾತನಾಡುತ್ತಾ ತಮ್ಮ ಸ್ಕೌಟಿಂಗ್ ಜೀವನ ನಡೆದು ಬಂದ ದಾರಿ ತಿಳಿಸುತ್ತಾ ಅದರ ಉಪಯುಕ್ತತೆ ಪಡೆದಿದ್ದನ್ನು ತಿಳಿಸಿದರು.

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಸ್ಥಳೀಯ ಸಂಸ್ಥೆಯ ಸ್ಕೌಟರ್ಸ್ / ಗೈಡರ್ಸ್‌ಗಳ ಸಮಾವೇಶವನ್ನು ದಿನಾಂಕ: 20-06-2011 ರಂದು ಏರ್ಪಡಿಸಿದ್ದರು. ಜಿಲ್ಲಾ ಪದಾಧಿಕಾರಿಗಳಾದ ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಆಯುಕ್ತರು ಶ್ರೀ ಎಸ್.ಜಿ. ಆನಂದ್ ಜಿಲ್ಲಾ ಕೋಶಾಧಿಕಾರಿ ಹಾಗೂ ಎನ್.ಆರ್. ಪ್ರಕಾಶ್, ಜಿಲ್ಲಾ ಕೆಂದ್ರ ಸ್ಥಾನಿಕ ಆಯುಕ್ತರು ಮತ್ತು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರಿ ಬಿ.ಎಂ. ಜಯಾಚಾರ್, ಜಿಲ್ಲಾ ಸಂಘಟಕಾದ ಶ್ರೀಮತಿ ದೀಪಶ್ರೀ ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಹಾ.ಮಾ. ನಾಯಕ್ ವಹಿಸಿದ್ದರು. ಜಿಲ್ಲಾ ಪಂಚಾಯತ್ ಮಾಜಿ ಉಪಾಧ್ಯಕ್ಷರಾದ ಶ್ರೀ ಪಾಣಿ ರಾಜಪ್ಪ ಸಭೆಯನ್ನು ಉದ್ಘಾಟಿಸಿದರು. ಅತಿಥಿಗಳಾಗಿ ಪಟ್ಟಣ ಪಂಚಾಯ್ತಿ ಉಪಾಧ್ಯಕ್ಷರು ಶ್ರೀ ಪ್ರಶಾಂತ್ ಮೇಸ್ತ್ರಿ ಸದಸ್ಯರಾದ, ಶ್ರೀ ದಿನಕರ ಬಾವೆ, ಶ್ರೀಮಹೇಶ್ ಗೌಳಿ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಸ್.ಎಸ್. ಬಣಕಾರ್ ಇವರುಗಳು ಭಾಗವಹಿಸಿದ್ದರು.

**Don't Hate But Love,**
**Don't Break off in Anger But Unite in Peace.**
**- Swami Vivekananda**

## ಬಾಗಲಕೋಟೆ

ಬಾಗಲಕೋಟೆ ತಾಲೂಕ ಮಟ್ಟದ ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸಂಸ್ಥೆ ಹಾಗೂ ಬಾದಾಮಿ ತಾಲೂಕ ಸಂಯೋಗದೊಂದಿಗೆ ದಿನಾಂಕ 08-07-2011 ರಂದು ಸರಕಾರಿ ಬಾಲಕಿಯರ ಪ್ರೌಢಶಾಲೆಯ ಸಭಾಭವನದಲ್ಲಿ ಜರುಗಿಸಲಾಯಿತು.

ಸಭೆಯ ಉದ್ಘಾಟನೆಯನ್ನು ಬಾಗಲಕೋಟ, ತಾಲೂಕ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಂ.ಡಿ. ವಾಲಿ ಅವರು ನೆರವೇರಿಸಿದರು. ಪ್ರತಿಯೊಂದು ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಸ್ಕೌಟ್ಸ್- ಗೈಡ್ಸ್, ದಳಗಳನ್ನು ಕಡ್ಡಾಯವಾಗಿ ಪ್ರಾರಂಭಿಸಲು ಶಿಕ್ಷಕ-ಶಿಕ್ಷಕಿಯರಿಗೆ ಕರೆ ಕೊಟ್ಟರು.

ಸ್ಕೌಟ್ ಮಾಸ್ಟರ್ ಶ್ರೀ ಎನ್. ಎಂ. ಅಗಸಿಮುಂದಿನ ಎಲ್ಲರನ್ನು ಸ್ವಾಗತಿಸಿದ ನಂತರ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರ, ಸಾವಳಗಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಜಿಲ್ಲಾ ಆಯುಕ್ತರಾದ ಶ್ರೀ ಜಿ.ಬಿ. ಇದ್ದಲಗಿ ಅವರು ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಾಹಿತಿಯನ್ನು ನೀಡಿದರು. ಮುಖ್ಯ ಅತಿಥಿ ಸ್ಥಾನವನ್ನು ಸರಕಾರಿ ಬಾಲಕಿಯರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಶ್ರಿ ಕೆ.ಬಿ. ಮುಗಳಖೂಡಾ ರವರು ವಹಿಸಿದ್ದರು. ಜಿಲ್ಲಾ ಸಂಘಟಕರಾದ ಶ್ರೀ ಶರೀಫ್ ಹತ್ತಿ ಮತ್ತೂರ ವಂದನಾರ್ಪಣೆಯನ್ನು ಸಲ್ಲಿಸಿದರು.

ಬಾದಾಮಿ ತಾಲೂಕು ಮಟ್ಟದ ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸಂಸ್ಥೆ ಹಾಗೂ ಬಾದಾಮಿ ತಾಲೂಕ ಸಂಯೋಗದೊಂದಿಗೆ ದಿನಾಂಕ 12-07-2011ರಂದು ಶ್ರೀ ವೀರಪುಲಕೇಶಿ ಪ್ರೌಢಶಾಲೆ ಒಳಾಂಗಣ ಕ್ರೀಡಾಂಗಣದಲ್ಲಿ ಬಾದಾಮಿ ಇಲ್ಲಿ ಜರುಗಿಸಲಾಯಿತು. ಸ್ಕೌಟ್ ಶಿಕ್ಷಕರು ಶ್ರೀ ಆರ್.ಎಂ. ಸೌರವಾಡ, ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರ, ಸಾವಳಗಿ ಅವರು ಪ್ರಾಸ್ತಾವಿಕವಾಗಿ ನುಡಿದರು. ಜಿಲ್ಲಾ ಆಯುಕ್ತರು, ಶ್ರೀ ಜಿ.ಬಿ. ಇದ್ದಲಗಿರವರು, ಸ್ಕೌಟ್ಸ್-ಗೈಡ್ಸ್‌ನ ಚಟುವಟಿಕೆಗಳ ಬಗ್ಗೆ, ಬೆಳವಣಿಗೆಯ ಬಗ್ಗೆ ಮಾಹಿತಿ ನೀಡಿದರು. ಜಿಲ್ಲಾ ಸಂಘಟಕರು ಶ್ರೀ ಎಸ್.ಹೆಚ್. ಹತ್ತಿಮತ್ತೂರ ವಂದನಾರ್ಪಣೆಯನ್ನು ಸಲ್ಲಿಸಿದರು.

## National Award

The President of India will present the National Award to the following Members of Bharat Scouts & Guides, Karnataka on 23rd Aug 2011 at Rashtrapti Bhavan, New Delhi.

a) **BAR - TO - SILVER STAR**
Sri K. Thimmaiah, District Chief Commissioner, Bharat Scouts and Guides, Raichur.

b) **SILVER STAR**
1) Smt. S.K. Prabha, LT(G) Headquarters Commissioner(G) for Planning & Development, Bharat Scouts & Guides, Karnataka
2) Sri M.N. Shadakshari, District Chief Commissioner, Bharat Scouts & Guides, Chikamangalur.
3) Sri Murugharajendra J. Chigateri, District Chief Commissioner, Bharat Scouts & Guides, Davanagere.
4) Sri M.K. Khan, District Chief Commissioner, Bharat Scouts & Guides, Bangalore South.

## ಬೀದರ್

ದಿನಾಂಕ 11-06-2011 ರಂದು ಗುರುನಾನಕ ಪಬ್ಲಿಕ್ ಶಾಲೆ, ಬೀದರದಲ್ಲಿ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳೊಂದಿಗೆ ಮುಖ್ಯ ಅತಿಥಿಗಳಾಗಿ ಶಾಲೆಯ ಪ್ರಿನ್ಸಿಪಾಲರಾದ ಶ್ರೀಮತಿ ಅರೀಫ್ ರವರು ಸಸಿಯನ್ನು ನೆಟ್ಟು, ಎಲ್ಲಾ ಸ್ಕೌಟ್ಸ್ - ಗೈಡ್ಸ್ ಮಕ್ಕಳು ತಮ್ಮ ತಮ್ಮ ಮನೆಯ ಮುಂದೆ ಸಸಿಗಳನ್ನು ನಡೆಲು ಹಾಗು ಪೋಷಿಸಲು ಕರೆ ನೀಡಿದರು.

ಸ್ಕೌಟ್ ಮಾಸ್ಟರ್ ಶ್ರೀ ಮಲ್ಲಿಕಾರ್ಜುನ, ಗೈಡ್ ಕ್ಯಾಪ್ಟನ್ ಶ್ರೀಮತಿ ಶೀಲಾ ಕುಲಕರ್ಣಿ ಹಾಗೂ ಎ.ಎಸ್.ಓ.ಸಿ(ಎಸ್.) ಎ.ಎಸ್. ಶಿವುಕುಮಾರ ಭಾಗವಹಿಸಿದ್ದರು.

## ಧಾರವಾಡ

ಗೋಕುಲ್ ರಸ್ತೆಯಲ್ಲಿರುವ ಓರಿಯಂಟಲ್ ಪಬ್ಲಿಕ್ ಸ್ಕೂಲಿನಲ್ಲಿ ವಿಶ್ವ ಪರಿಸರ ದಿನಾಚರಣೆಯೊಂದಿಗೆ ದಿನಾಂಕ 2011-12 ನೇ ಸಾಲಿನ ಕಬ್ಸ್-ಬುಲ್ ಬುಲ್ಸ್ / ಸ್ಕೌಟ್-ಗೈಡ್ಸ್ ಮಕ್ಕಳ ಚಟುವಟಿಕೆಗಳಿಗೆ ಚಾಲನೆ ನೀಡುವ ಕಾರ್ಯಕ್ರಮ ನಡೆಸಲಾಯಿತು.

ದಿನಾಂಕ: 11 ರಂದು ಮುಂಜಾನೆ ಸ್ಕೌಟ್-ಗೈಡ್ಸ್ ಮಕ್ಕಳಿಂದ ಸ್ಕೌಟ್ ಧ್ವಜಾರೋಹಣ ಹಾಗೂ ಶಾಲಾ ಆವರಣದಲ್ಲಿ ಸಸಿನೆಡುವ ಕಾರ್ಯ ನಡೆಯಿತು. ಮುಖ್ಯ ಅತಿಥಿಗಳಾಗಿ ಕುಮಾರಿ ಪ್ರೇಮಾ ಮಂಗಳೂರು ಜಿಲ್ಲಾ ತರಬೇತಿ ಆಯುಕ್ತರು, ಧಾರವಾಡ, ಶ್ರೀ ಬಿ.ಕೆ. ಪಾಟೀಲ, ಜಿಲ್ಲಾ ಜಿಲ್ಲಾ ತರಬೇತಿ ಆಯುಕ್ತರು, (ಸ್ಕೌಟ್) ಧಾರವಾಡ ಶ್ರೀ ಎಸ್.ಎಸ್. ನಾಗಣಸೂರೆ, ಸರಕಾರಿ ಮರಾಠಿ ಸ್ಕೂಲ್, ಬ್ರಾಡವೆ, ಹುಬ್ಬಳ್ಳಿ, ಶ್ರೀ ಜಿ.ಕೆ. ಮಠಪತಿ, ಕುರುಪಾದಂ ತೆಲಗು ಪ್ರೌಢಶಾಲೆ ಹಾಗೂ ಆನಂದನಗರದ ಉರ್ದು ಶಾಲೆ ಹಾಗೂ ಜೆಂಟ್ಸ್ ಕನ್ನಡ ಹಾಗು ಆಂಗ್ಲ ಮಾಧ್ಯಮ ಶಾಲೆಯ ಶಿಕ್ಷಕ ಹಾಗೂ ಶಿಕ್ಷಕಿಯರು ಹಾಜರಿದ್ದರು.

## ಬಳ್ಳಾರಿ

ದಿನಾಂಕ 16-06-2011 ರಂದು ಬಳ್ಳಾರಿ ತಾಲ್ಲೂಕ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಸ್ಕೌಟ್/ಗೈಡ್ ಭವನ ಬಳ್ಳಾರಿಯಲ್ಲಿ ನಡೆಸಲಾಯಿತು. 52 ಸ್ಕೌಟ್ ಮಾಸ್ಟರ್/ ಕಬ್ ಮಾಸ್ಟರ್ / ಫ್ಲಾಕ್ ಲೀಡರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಈ ಸಭೆಯಲ್ಲಿ ಹಾಜರಾಗಿದ್ದರು. ಉಪಾಧ್ಯಕ್ಷರಾದ ಶ್ರೀಮತಿ ಸಂಧ್ಯಾ ಕೊಲಾಚಲಮ್, ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 17-06-2011 ರಂದು ಶಿರಗುಪ್ಪ ತಾಲ್ಲೂಕ ಸ್ಕೌಟರ್ಸ್ ಗೈಡರ್ಸ್ ಸಮಾವೇಶವನ್ನು ಶಾಂತಿನಿಕೇತನ ಪ್ರೌಢಶಾಲೆಯಲ್ಲಿ ನಡೆಸಲಾಯಿತು. ತಾಲ್ಲೂಕಿನ 28 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಡಿ.ಎ. ತಿಮ್ಮಣ್ಣ ಹಾಗೂ ಅಧ್ಯಕ್ಷರು, ತಾಲ್ಲೂಕ ಸಂಸ್ಥೆ, ಹಾಜರಿದ್ದರು.

ದಿನಾಂಕ: 18-06-2011 ರಂದು ಹೊಸಪೇಟೆ ತಾಲ್ಲೂಕಿನ ಸ್ಕೌಟರ್ಸ್ / ಗೈಡರ್ಸ್ ಸಮಾವೇಶವನ್ನು ವಿವೇಕಾನಂದ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆಸಲಾಯಿತು. 32 ಸ್ಕೌಟರ್ಸ್ / ಗೈಡರ್ಸ್ ಗಳು ಭಾಗವಹಿಸಿದ್ದರು. ಶ್ರೀ ಸೀತಾರಾಮ ಶೆಟ್ಟಿ, ಉಪಾಧ್ಯಕ್ಷರು, ತಾಲ್ಲೂಕ ಸಂಸ್ಥೆ, ಹೊಸಪೇಟೆ ಇವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 23-06-2011 ರಂದು ಹಗರಿ ಬೊಮ್ಮನಹಳ್ಳಿ ತಾಲ್ಲೂಕಿನ ಸ್ಕೌಟರ್ಸ್ / ಗೈಡರ್ಸ್ ಸಭೆ ರಾಷ್ಟ್ರೋತ್ಥಾನ ಪ್ರೌಢಶಾಲೆಯಲ್ಲಿ ನಡೆಸಲಾಯಿತು. ಈ ಸಭೆಯಲ್ಲಿ 28 ಸ್ಕೌಟರ್ಸ್ / ಗೈಡರ್ಸ್‌ಗಳು ಭಾಗವಹಿಸಿದ್ದರು. ಡಾ|| ಹೆಚ್.ಎನ್.ಪಿ. ವಿಠಲ್, ಉಪಾಧ್ಯಕ್ಷರು ತಾಲ್ಲೂಕ ಸಂಸ್ಥೆ, ಹಾಜರಿದ್ದರು.

ದಿನಾಂಕ: 24-06-2011 ರಂದು ಕೂಡ್ಲಿಗಿ ತಾಲ್ಲೂಕಿನ ಸ್ಕೌಟರ್ಸ್/ಗೈಡರ್ಸ್ ಸಮಾವೇಶ ಸರ್ಕಾರಿ ಪದವಿ ಪೂರ್ವ ಕಾಲೇಜ್ ಕೂಡ್ಲಿಗಿಯಲ್ಲಿ ನಡೆಸಲಾಯಿತು. ಶ್ರೀ ಕೆ. ವೀರಯ್ಯ, ಉಪಾಧ್ಯಕ್ಷರು, ತಾಲ್ಲೂಕ ಸಂಸ್ಥೆ, ಕೂಡ್ಲಿಗಿ ಇವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 25-06-2011 ರಂದು ಸಂಡೂರು ತಾಲ್ಲೂಕಿನ ಸ್ಕೌಟರ್ಸ್/ಗೈಡರ್ಸ್ ಸಮಾವೇಶವನ್ನು ಬಿ.ಆರ್.ಸಿ. ಕಟ್ಟಡದಲ್ಲಿ ನಡೆಸಲಾಯಿತು. 28 ಸ್ಕೌಟರ್ಸ್/ಗೈಡರ್ಸ್‌ಗಳು ಭಾಗವಹಿಸಿದ್ದರು. ಶ್ರೀ ಸಿದ್ಧಪ್ಪ ಉಪಾಧ್ಯಕ್ಷರು, ಹಾಗೂ ಬಿ.ಆರ್.ಸಿ. ಇವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ: 04-07-2011 ರಂದು ಹೂವಿನ ಹಡಗಲಿ ತಾಲ್ಲೂಕಿನ ಸ್ಕೌಟರ್ಸ್ / ಗೈಡರ್ಸ್ ಸಮಾವೇಶ ಶ್ರೀ ಮ.ಮಾ. ಪಾಟೀಲ್, ಪದವಿ ಪೂರ್ವ ಕಾಲೇಜಿನಲ್ಲಿ ನಡೆಸಲಾಯಿತು. ಶ್ರೀ ಬೆಟ್ಟಯ್ಯ, ಹೆಚ್. ಎಂ. ಉಪಾಧ್ಯಕ್ಷರು, ತಾಲ್ಲುಕ ಸಂಸ್ಥೆ ಇವರು. ಅಧ್ಯಕ್ಷತೆ ವಹಿಸಿದ್ದರು.

ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಸ್ಥಳಿಯ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಮೈಸೂರು

ದಿನಾಂಕ 28-06-2011 ರಿಂದ 29-06-2011 ರ ವರೆಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್ ಮತ್ತು ಗೈಡ್ಸ್ ಭವನ, ಮೈಸೂರಿನಲ್ಲಿ ದ್ವಿತೀಯ ಸೋಪಾನ ಮತ್ತು ತೃತೀಯ ಸೋಪಾನ ಪರೀಕ್ಷಾ ಶಿಬಿರ ಜರುಗಿತು. ದ್ವಿತೀಯ ಸೋಪಾನಕ್ಕೆ 78 ಮಕ್ಕಳು ಮತ್ತು ತೃತೀಯ ಸೋಪಾನಕ್ಕೆ 327 ಮಕ್ಕಳು ಭಾಗವಹಿಸಿದ್ದರು. ಶ್ರೀ ಕೆ.ಜಿ. ಗೋಪಾಲಕೃಷ್ಣ, ಶ್ರೀಮತಿ ಶಾಂತಗಿರಿಯಣ್ಣ, ನಾಯಕರುಗಳಾಗಿ ಕರ್ತವ್ಯ ನಿರ್ವಹಿಸಿದರು. ದಿನಾಂಕ 30-06-2011 ರಂದು ಮುಕ್ತಾಯ ಸಮಾರಂಭವು ಜರುಗಿತು.

ದಿನಾಂಕ: 01-07-2011 ರಂದು ಶ್ರೀ ಜಯ ಚಾಮರಾಜೇಂದ್ರ ಸ್ಕೌಟ್ಸ್, ಗೈಡ್ಸ್ ಭವನ, ಮೈಸೂರಿನಲ್ಲಿ ಸ್ಕೌಟರ್ಸ್ ಗೈಡರ್ಸ್ ಸಮಾವೇಶ ಜರುಗಿತು.

ಶ್ರೀ ಕೆ.ಜಿ. ಗೋಪಾಲಕೃಷ್ಣ, ಸ್ಕೌಟ್ ವಿಭಾಗಕ್ಕೆ, ಶ್ರೀಮತಿ ಶಾಂತಗಿರಿಯಣ್ಣ, ಗೈಡ್ ವಿಭಾಗಕ್ಕೆ ಶ್ರೀಮತಿ ರಾಧಮ್ಮ ಕಬ್ ವಿಭಾಗಕ್ಕೆ ಶ್ರಿಮತಿ ಎಂ.ಎನ್. ನಾಗರತ್ನಮ್ಮ, ಬುಲ್ ಬುಲ್ ವಿಭಾಗಕ್ಕೆ, ನಾಯಕರಾಗಿ ಕರ್ತವ್ಯ ನಿರ್ವಹಿಸಿದರು. ಸಂಜೆ ನಡೆದ ಮುಕ್ತಾಯ ಸಮಾರಂಭದಲ್ಲಿ ಶ್ರಿ ನಾಗೇಂದ್ರ ಕುಮಾರ್, ಡಿ.ಡಿ.ಪಿ.ಐ. ಅತಿಥಿಗಳಾಗಿ ಭಾಗವಹಿಸಿದ್ದರು.

## ರಾಯಚೂರು

ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಹುಡಾ ಇಲ್ಲಿ ದಿನಾಂಕ 07-07-2011 ರಂದು ಶಾಲಾ ಆವರಣದಲ್ಲಿ ಗಿಡಗಳನ್ನು ನೆಡುವುದರ ಮೂಲಕ ವನಮಹೋತ್ಸವ ಆಚರಿಸಲಾಯಿತು. ವಿವೇಕಾನಂದ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕದವರು ಶಾಲೆಗೆ 10 ಗಿಡಗಳನ್ನು ದಾನವಾಗಿ ನೀಡಿದರು. ಈ ಕಾರ್ಯಕ್ರಮದಲ್ಲಿ ಎಸ್.ಡಿ.ಎಂ.ಸಿ.ಯ ಅಧ್ಯಕ್ಷರು ಹಾಗೂ ಸದಸ್ಯರು ಮತ್ತು ಶಾಲೆಯ ಎಲ್ಲಾ ಶಿಕ್ಷಕರು ಹಾಗೂ ಮಕ್ಕಳು ಹಾಜರಿದ್ದರು. ಕಾರ್ಯಕ್ರಮದ ನಂತರ ಶಾಲೆಯ ಎಲ್ಲಾ ವಿದ್ಯಾರ್ಥಿಗಳು ನಗರದಲ್ಲಿ ಪಥಸಂಚಲನದ ಮೂಲಕ ಪರಿಸರ ಸಂರಕ್ಷಣೆ ಕುರಿತು. ಜಾಗೃತಿ ಮೂಡಿಸಿದರು.

ದಿನಾಂಕ 21-06-2011 ರಂದು ದೇವದುರ್ಗ ತಾಲೂಕು ಮಟ್ಟದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶವನ್ನು ದೇವದುರ್ಗದಲ್ಲಿ ಏರ್ಪಡಿಸಲಾಗಿತ್ತು. ಸಮಾವೇಶವನ್ನು ಮಾನ್ಯಶ್ರೀ ಹೆಚ್. ಹುನಗುಂದ, ಬಿ.ಇ.ಓ., ದೇವದುರ್ಗ ಇವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಶ್ರೀ ಸಿ.ಎಸ್. ಶಿಂಧೆ ತಾಲೂಕ ದೈಹಿಕ ವಿಷಯ ಪರಿವೀಕ್ಷಕರು ದೇವದುರ್ಗ ಇವರು ವಹಿಸಿಕೊಂಡಿದ್ದರು. ಸಮಾವೇಶದಲ್ಲಿ 51 ಸ್ಕೌಟರ್ಸ್ - ಗೈಡರ್ಸ್ ಭಾಗವಹಿಸಿದ್ದರು.

ದಿನಾಂಕ 22-06-2011 ರಂದು ರಾಯಚೂರು ತಾಲ್ಲೂಕು ಮಟ್ಟದ ಸ್ಕೌಟರ್ಸ್ - ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಯಿತು. ಸಮಾವೇಶದ ಉದ್ಘಾಟನೆಯನ್ನು ಡಾ.ಆರ್. ನರಸಿಂಹಮೂರ್ತಿ, ಜಿಲ್ಲಾ ಆಯುಕ್ತರು (ಸ್ಕೌ) ಇವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾಕಾರ್ಯದರ್ಶಿ, ಅಮರೇಗೌಡ ಪಾಟೀಲ ಅವರು ವಹಿಸಿದ್ದರು. ಈ ಸಮಾರಂಭದಲ್ಲಿ ಒಟ್ಟು 45 ಸ್ಕೌಟರ್ಸ್ - ಗೈಡರ್ಸ್‌ಗಳು ಭಾಗವಹಿಸಿದ್ದರು.

ದಿನಾಂಕ: 06-07-2011 ರಂದು ಸಿಂಧನೂರು ತಾಲೂಕು ಮಟ್ಟದ ಸ್ಕೌಟರ್ಸ್- ಗೈಡರ್ಸ್ ಸಮಾವೇಶವನ್ನು ನಗರದ ಆರ್.ಜಿ.ಎಂ. ಪ್ರೌಢಶಾಲೆಯಲ್ಲಿ ಹಮ್ಮಿಕೊಳ್ಳಲಾಯಿತು. ಸಮಾವೇಶವನ್ನು ಮಾನ್ಯಶ್ರೀ ಋಷಬೇಂದ್ರಯ್ಯ ಸ್ವಾಮಿ ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಶ್ರೀ ಎಸ್. ಶರಣೇಗೌಡ ಅಧ್ಯಕ್ಷರು ಸ್ಥಳೀಯ ಸಂಸ್ಥೆ ಸಿಂಧನೂರು ಇವರು ವಹಿಸಿಕೊಂಡಿದ್ದರು. ನಗರ ಸಭೆಯ ಸದಸ್ಯರಾಗಿರುವ ಶರಣೇಗೌಡ ಇವರು ತಮ್ಮ ಭಾಷಣದಲ್ಲಿ ನಗರದ ಎಸ್.ಸಿ./ಎಸ್.ಟಿ. ಸ್ಕೌಟ್ಸ್-ಗೈಡ್ಸ್‌ಗಳಿಗೆ ನಗರಸಭೆಯಿಂದ ಒಂದು ಲಕ್ಷ ರೂ. ಹಣದಲ್ಲಿ ಸಮವಸ್ತ್ರದ ವ್ಯವಸ್ಥೆ ಮಾಡಲಾಗಿದೆ ಎಂದು ಹೇಳಿದರು. ಮುಖ್ಯ ಅತಿಥಿಗಳಾಗಿ ಶ್ರೀ ಧರ್ಮಾಯತ್, ಉಪನ್ಯಾಸಕರು, ಶ್ರೀ ರಾಮದಾಸ್, ಶ್ರೀ ಪ್ರಹ್ಲಾದ್ ರಾಜ್ ಹಾಗೂ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ರಾವುತ್ ರಾವ್ ಬರೂರ ಭಾಗವಹಿಸಿದ್ದರು.

ದಿನಾಂಕ: 15-07-2011 ರಂದು ಮಾನವಿ ತಾಲೂಕ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ನಗರದ ಶಿಕ್ಷಕರ ಭವನದಲ್ಲಿ ಹಮ್ಮಿಕೊಳ್ಳಲಾಯಿತು. ಸಮಾವೇಶದ ಉದ್ಘಾಟನೆಯನ್ನು ಶ್ರೀ ಬಿ. ರಾಮಾಂಜನೇಯ, ಬಿ.ಇ.ಓ., ಮಾನವಿ ಇವರು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಚಂದ್ರಶೇಖರ. ಬಿ., ಬಿ.ಆರ್.ಸಿ. ಅಧಿಕಾರಿಗಳು ಮಾನವಿ, ಶ್ರೀಮತಿ ಆಲೀಶಾ, ದೈ.ವಿ.ಪ., ಶ್ರೀಮತಿ ಮಾಧವಿ ಹಾಗೂ ಶ್ರೀ ಆರ್.ಹೆಚ್. ಸಾಗರ ಆಗಮಿಸಿದ್ದರು.

ದಿನಾಂಕ: 18-07-2011 ರಂದು ಲಿಂಗಸಗೂರು ತಾಲೂಕ ಮಟ್ಟದ ಸಮಾವೇಶವನ್ನು ನಗರದ ಶಾಸಕರ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಹಮ್ಮಿಕೊಳ್ಳಲಾಯಿತು. ಸಮಾವೇಶವನ್ನು ಶ್ರೀ ಎಸ್.ಎನ್. ಪೋಲಿಸ್ ಪಾಟೀಲ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಲಿಂಗಸಗೂರು ಇವರು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಆಯುಕ್ತರಾದ ಶ್ರೀ ಜಿ.ವಿ. ಕೆಂಪನಗೌಡ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕ್ಷೇತ್ರ ಸಂಪನ್ಮೂಲ ಅಧಿಕಾರಿ ಶ್ರೀ ವೆಂಕಟೇಶ ಗುಡಾಳ, ಶ್ರೀ ಪಂಚಾಕ್ಷರಿಯಲ್ಲಿ ಹಿರೇಮಠ, ಕು. ಸರಿತಾ, ಶ್ರೀ ಶಿವಾಪುತ್ರಪ್ಪ ಭೂತಾಲ್ ಭಾಗವಹಿಸಿದ್ದರು. ಸಮಾವೇಶದಲ್ಲಿ ಒಟ್ಟು 48 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

## ದಾವಣಗೆರೆ

ದಿನಾಂಕ 25-06-2011 ರಂದು ರೋಟರಿ ಬಾಲ ಭವನದಲ್ಲಿ ಶ್ರೀ ಕೊಂಡಜ್ಜಿ ಬಸಪ್ಪ ಅಭಿಮಾನಿ ಬಳಗದ 3ನೇ ವರ್ಷದ ಸಮಾರಂಭದಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಹೆಚ್ಚು ಅಂಕಗಳಿಸಿದ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರುಗಳನ್ನು ಗುರುತಿಸಿ ಅಭಿನಂದಿಸಲಾಯಿತು. ಸದರಿ ಸಮಾರಂಭದ ಉದ್ಘಾಟನೆಯನ್ನು ಜಗದ್ಗುರು ಡಾ|| ಮಹಾಂತ ಶಿವಾಚಾರ್ಯ ಸ್ವಾಮೀಜಿ ಇವರು ನೆರವೇರಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಬಗ್ಗೆ ಅವರ ಅಭಿಮಾನ ಮತ್ತು ಕೊಂಡಜ್ಜಿ ತರಬೇತಿ ಕೇಂದ್ರದ ಬಗ್ಗೆ ಶ್ರೀಮತಿ ಮಂಜುಳಾ. ಸಿ. ಇವರು ತಿಳಿಸಿದರು.

"Congratulations"

## *Prime Minister Shield Competition Award*

**The Bharat Scouts and Guides National Headquarters, New Delhi.**

**Selected " NETHAJI OPEN SCOUT TROOP,**

**Davanagere for the Award of Prime Minister**

**Shield Certificate for the year 2009-10. The Shield Certificate will be presented to the Nethaji Open Scout Troop., at New Delhi.**

## ಹಾಸನ

ದಿನಾಂಕ 17-06-2011 ರಿಂದ 19-06-2011 ರ ವರೆಗೆ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ತೃತೀಯ ಸೋಪಾನ ತರಬೇತಿ ಶಿಬಿರವನ್ನು ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಭವನದಲ್ಲಿ 3 ದಿನಗಳ ಕಾಲ ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ ಜಿಲ್ಲಾದ್ಯಂತ ವಿವಿಧ ಶಾಲಾ ಕಾಲೇಜುಗಳಿಂದ 210 ಸ್ಕೌಟ್ಸ್ ಹಾಗು ಗೈಡ್ಸ್ ಮಕ್ಕಳು ಭಾಗವಹಿಸಿದ್ದರು. ಅವರೊಂದಿಗೆ 20 ಸ್ಕೌಟ್ಸ್ -ಗೈಡ್ಸ್ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಸ್ಕೌಟ್ಸ್ ವಿಭಾಗಕ್ಕೆ ಶ್ರೀಯುತ ಎಂ.ಎಸ್. ಪ್ರಕಾಶ್, ಗೈಡ್ ವಿಭಾಗಕ್ಕೆ ಶ್ರೀಮತಿ ಕಾಂಚನಮಾಲಾ ರವರು ಕಾರ್ಯ ನಿರ್ವಹಿಸಿದರು. ಶಿಬಿರದ ಉದ್ಘಾಟನಾ ಸಮಾರಂಭವು ದಿನಾಂಕ: 1-6-2011 ರಂದು ಶ್ರೀಯುತ ವೈ. ಎಸ್. ವೀರಭದ್ರಪ್ಪರವರು ಜಿಲ್ಲಾ ಮುಖ್ಯ ಆಯುಕ್ತರವರ ಅಧ್ಯಕ್ಷತೆಯಲ್ಲಿ ನೆರವೇರಿತು.

## ಮಂಡ್ಯ

ದಿನಾಂಕ 04-05-2011 ರಿಂದ 07-05-2011 ರ ವರೆಗೆ ಮದ್ದೂರು ತಾಲ್ಲೂಕು ಗೆಜ್ಜಲಗೆರೆ ಮೊರಾರ್ಜಿ ದೇಸಾಯಿ ವಸತಿ ಶಾಲೆಯ ಆವರಣದಲ್ಲಿ ಗೆಜ್ಜಲಗೆರೆ ಗ್ರಾಮಸ್ಥರ ಹಾಗೂ ಮೊರಾರ್ಜಿ ದೇಸಾಯಿ ವಸತಿ ಶಾಲೆಯ ಪ್ರಾಚಾರ್ಯರು ಮತ್ತು ಸಿಬ್ಬಂದಿ ವರ್ಗದವರ ಸಂಪೂರ್ಣ ಸಹಕಾರದಿಂದ ರಾಜ್ಯ ಪುರಸ್ಕಾರ್ ಸ್ಕೌಟ್ಸ್ ಮತ್ತು ಗೈಡ್ಸ್ ಪೂರ್ವಸಿದ್ಧತಾ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ 250 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರಕ್ಕೆ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಮುಖ್ಯ ಆಯುಕ್ತರು, ಜಿಲ್ಲಾ ಸ್ಕೌಟ್ ಆಯುಕ್ತರು, ಜಿಲ್ಲಾ ಗೈಡ್ ಆಯುಕ್ತರುಗಳು, ಭೇಟಿ ನೀಡಿ ಶಿಬಿರ ಯಶಸ್ವಿಯಾಗಿ ನಡೆಯಲು ಸಹಕರಿಸಿದರು.

ದಿನಾಂಕ 10-06-2011 ರಂದು ಮಂಡ್ಯ ಜಿಲ್ಲಾ ಸ್ಕೌಟ್ ಭವನದಲ್ಲಿ ಮಂಡ್ಯ ದಕ್ಷಿಣ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ಕೌಟರ್-ಗೈಡರ್ ಸಮಾವೇಶ ನಡೆಯಿತು. ದೈಹಿಕ ಶಿಕ್ಷಣ ಪರಿವೀಕ್ಷಕರು ಈ ಸಭೆಯಲ್ಲಿ ಭಾಗವಹಿಸಿದ್ದರು. ದಿನಾಂಕ 13-06-2011 ರಂದು ಶ್ರೀರಂಗಪಟ್ಟಣ ಲೆನಿನ್ ಕಾನ್ವೆಂಟ್ ಶಾಲೆಯಲ್ಲಿ ಶ್ರೀರಂಗಪಟ್ಟಣ ತಾಲ್ಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಭೆಯು ಶ್ರೀರಂಗಪಟ್ಟಣ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಭಾಗವಹಿಸಿದ್ದರು.

ದಿನಾಂಕ 14-06-2011 ರಂದು ಪಾಂಡವಪುರ ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ ಪಾಂಡವಪುರ ತಾಲ್ಲೂಕು ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳ ಸಭೆಯು ನಡೆಯಿತು. ಈ ಸಭೆಯ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಭಾಗವಹಿಸಿದ್ದರು. ದಿನಾಂಕ: 17-06-2011 ರಂದು ಮದ್ದೂರು ಸರ್ಕಾರಿ ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮದ್ದೂರು ತಾಲ್ಲೂಕು ಸ್ಕೌಟರ್ ಮತ್ತು ಗೈಡರ್‌ಗಳ ಸಭೆಯು ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಮತ್ತು ಮದ್ದೂರು ತಾಲ್ಲೂಕು ಶಿಕ್ಷಕರ ಸಂಘದ ಅಧ್ಯಕ್ಷರು ಭಾಗವಹಿಸಿದ್ದರು.

ದಿನಾಂಕ 20-06-2011 ರಂದು ಮಳವಳ್ಳಿಯ ಸರ್ಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಳವಳ್ಳಿ ತಾಲ್ಲೂಕು ಸ್ಕೌಟರ್ ಮತ್ತು ಗೈಡರ್‌ಗಳ ಸಭೆಯು ನಡೆಯಿತು. ಈ ಸಭೆಯ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಭಾಗವಹಿಸಿದ್ದರು. ದಿನಾಂಕ 24-06-2011 ರಂದು ಕೆ.ಆರ್. ಪೇಟೆ ಸರ್ಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಕೆ.ಆರ್. ಪೇಟೆ ತಾಲ್ಲೂಕು ಸ್ಕೌಟರ್ ಮತ್ತು ಗೈಡರ್‌ಗಳ ಸಭೆಯು ಕೆ. ಆರ್. ಪೇಟೆ ತಾಲ್ಲುಕು ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಭಾಗವಹಿಸಿದ್ದರು.

ದಿನಾಂಕ 25-06-2011 ರಂದು ನಾಗಮಂಗಲ ಸರ್ಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಾಗಮಂಗಲ ತಾಲ್ಲೂಕು ಸ್ಕೌಟರ್ಸ್ ಮತ್ತು ಗೈಡರ್‌ಗಳ ಸಭೆಯು ನಾಗಮಂಗಲ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಭಾಗವಹಿಸಿದ್ದರು. ದಿನಾಂಕ 28-06-2011 ರಂದು ಮಂಡ್ಯ ನಗರದ ದಕ್ಷಿಣ ವಲಯದ ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ ಮಂಡ್ಯ ತಾಲ್ಲೂಕು ಉತ್ತರ ವಲಯದ ಸ್ಥಳೀಯ ಸಂಸ್ಥೆಯ ಸ್ಕೌಟರ್ ಮತ್ತು ಗೈಡರ್‌ಗಳ ಸಭೆಯು ಮಂಡ್ಯ ಉತ್ತರ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು.

## ಉಡುಪಿ

ಉಡುಪಿ ಜಿಲ್ಲಾ ಸಂಸ್ಥೆ ಹಾಗೂ ರೋಟರಿ ಉಡುಪಿ ಮತ್ತು ಇನ್ನರ್ ವೀಲ್ ಕ್ಲಬ್ ಉಡುಪಿ ಇವರ ಜಂಟಿ ಆಶ್ರಯದಲ್ಲಿ ದಿನಾಂಕ 17-07-2011 ರಂದು ಕಾರಂತ ಕಲಾ ಗ್ರಾಮ ಪ್ರಗತಿನಗರ, ಮಣಿಪಾಲ ಇಲ್ಲಿ ವನಮಹೋತ್ಸವ ಕಾರ್ಯಕ್ರಮವನ್ನು ಸಂಘಟಿಸಲಾಯಿತು. ಡಾ|| ಎಂ.ಟಿ. ರೇಜು ಜಿಲ್ಲಾಧಿಕಾರಿಗಳು ಉಡುಪಿ ಇವರು ಗಿಡವನ್ನು ನೆಡುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿ ವಿದ್ಯಾರ್ಥಿಗಳು ಪರಿಸರವನ್ನು ಪ್ರೀತಿಸಿ, ಹೆಚ್ಚು ಹೆಚ್ಚು ಗಿಡಗಳನ್ನು ಬೆಳೆಸಿ ಪರಿಸರವನ್ನು ಸಂರಕ್ಷಿಸಿ ಎಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶ್ರೀಮತಿ ಶಾಂತಾ ವಿ. ಆಚಾರ್ಯ ರಾಜ್ಯ ಆಯುಕ್ತರು ಗೈಡ್ ಅವರು ಮರದಿಂದ ಮಳೆ - ಮಳೆಯಿಂದ ಬೆಳೆ - ಬೆಳೆಯಿಂದ ಸಮೃದ್ಧಿ ಸಾದ್ಯ ಎಂದು ತಿಳಿಸಿದರು. ಇನ್ನೋರ್ವ ಮುಖ್ಯ ಅತಿಥಿ ಶ್ರೀ ಹರೀಶ್ ಕಿಣಿ ಅಧ್ಯಕ್ಷರು, ಗ್ರಾಮ ಪಂಚಾಯತ್ ಅಲೆವೂರು ಇವರು ನಮ್ಮ ಗ್ರಾಮಪಂಚಾಯತ್ ವ್ಯಾಪ್ತಿಯಲ್ಲಿ ಈ ಗಿಡ ನೆಡುವ ಕಾರ್ಯಕ್ರಮ ವನ್ನು ಹಮ್ಮಿಕೊಂಡಿರುವುದಕ್ಕೆ ಕೃತಜ್ಞತೆಯನ್ನು ಸಲ್ಲಿಸಿದರು. ರೋ|| ಪಿ. ರಬೀಂದ್ರ ನಾಯಕ್ ಇವರು ಅಧ್ಯಕ್ಷತೆ ವಹಿಸಿ ಮಾತನಾಡಿ ಗಿಡಳನ್ನು ನೆಡುವುದರಿಂದ ಉತ್ತಮ ಆಮ್ಲಜನಕ ದೊರೆಯುವುದು ಎಂದು ತಿಳಿಸಿದರು. ರೊ|| ಟಿ.ಜಿ. ವಾರಂಬಳ್ಳಿ ಅಧ್ಯಕ್ಷರು ರೋಟರಿ ಉಡುಪಿ ಇವರು ಸ್ವಾಗತಿಸಿ ಸ್ಕೌಟ್-ಗೈಡ್ ತರಬೇತಿ ಕೇಂದ್ರದಲ್ಲಿ ಒಂದು ಸಾವಿರ ಗಿಡಗಳನ್ನು ನೆಡುವ ಪೂರ್ಣ ವೆಚ್ಚವನ್ನು ರೊ|| ಪಿ. ರಬೀಂದ್ರ ನಾಯಕ್ ಭರಿಸಲಿದ್ದಾರೆ ಹಾಗೂ ಅರಣ್ಯ ಇಲಾಖೆಯವರು ಉಚಿತವಾಗಿ ಗಿಡಗಳನ್ನು ನೀಡಿ ಸಹಕರಿಸಿದ್ದಾರೆಂದು ತಿಳಿಸಿದರು.

ಶ್ರೀ ಕೆ. ಶೇಖರ್ ಪೂಜಾರಿ ಜಿಲ್ಲಾ ಕಾರ್ಯದರ್ಶಿ ವಂದಿಸಿದರು. ಶ್ರೀ ಕೊಗ್ಗ ಗಾಣಿಗ ಜಿಲ್ಲಾ ತರಬೇತಿ ಆಯುಕ್ತರು, ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಕೆ.ಟಿ. ರಾವ್ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಆಯುಕ್ತರು(ಗೈಡ್ಸ್) ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಇನ್ನರ್ ವೀಲ್ ಅಧ್ಯಕ್ಷೆ ಶ್ರೀಮತಿ ಲಕ್ಷ್ಮೀ ದಿವಾಕರ್, ರೊ|| ಪ್ರಸನ್ನ ಕಲ್ಕೂರ ಕಾರ್ಯದರ್ಶಿ ರೋಟರಿ, ಮಾಧವ ಪೈ ಮೆಮೋರಿಯಲ್ ಕಾಲೇಜಿನ ಪ್ರಾಂಶುಪಾಲರು ಶ್ರೀ ದಯಾನಂದ್ ಶೆಟ್ಟಿ, ಕಲ್ಯಾಣಪುರ ಮಿಲಾಗ್ರಿಸ್ ಕಾಲೇಜಿನ ರೋವರ್ ಲೀಡರ್ ಶ್ರೀ ವಿಠಲ್ ನಾಯಕ್ ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು., ಸ್ಕೌಟ್-ಗೈಡ್, ರೋವರ್-ರೇಂಜರ್ಸ್, ಸ್ಕೌಟರ್, ಗೈಡರ್, ರೇಂಜರ್ ಲೀಡರ್ ಭಾಗವಹಿಸಿದ್ದರು.

## 34th World Conference at Edinburgh Scotland United Kingdom

**Smt. Vanitha Nara;yan, D.C(G), Smt. Gayathri M. Singh, ADC(G), Bridget Aydline Pinto, Young Leader from Bangalore North District & Sr. Cynthia, LT(G) from Chikmagalur District participated in the 34th World Conference at Edinburgh Scotland United Kingdom from 11th to 15th July 2011**

***Not to take things too Seriously,***
***but to make the best of what you***
***have got, and to look on life as a game,***
***and the World as a play ground.***
***And let actions and thoughts be directed by love.***
***- Baden Powell***

# • Gone Home •

## Sri D.V. Bellad, D.D.P.I. (Retd.) and District Commissioner (Scout) Gadag



Sri D.V. Bellad, Deputy Director of Public Instruction (Retd) and District Commissioner (S) of Gadag District and Member State Council passed away on 28th June 2011 at Gadag He was very closely Associated with the Scout / Guide Movement for more than three decades and served the Movement as Assistant District Commissioner (S), Headquarters Commissioner(S) in Gadag District for a number of years. He was responsible to organize the 26th State Level Cub-Bulbul Utsav at Gadag during the year 2003 very successfully. He served the Movement as District Commissioner(S) of Haveri District when he was working as DDPI of Haveri and presently he was serving the Movement as District Commissioner(S) Gadag District for the last 3 years. He participated in the World Scout Centenary Jamboree held at London During the year 2007 as a member of Karnataka State Contingent representing India.

He served the Department of Education in different capacities as Inspector of Schools, Head Master, BEO and rose to become DDPI and was a very popular Officer in the Department, where he served with distinction for more than 35 years. He leaves behing his Wife. two Sons and Host of Relatives, Friends and Admirers, May his soul Rest in Peace

# • Gone Home •



## Sri B. Chennamallu, Former Member State Council, & Dist. Treasurer of Bangalore South District

Sri B. Chennamallu, Former Member State Council of Bharat Scouts and Guides, Karnataka, passed away on Sunday the 26th June 2011 at Bangalore at the age of 66 years. He leaves behind his wife, Son, Daughter, Grand Children, Host of relatives, well-wishers and admirers. He served the Movement in several capacities such as Scout Master (35 years) in the Maruthi Vidyalaya School, Hombegowda Nagar, Bangalore. District Treasurer and District Quarter Master of Bangalore South District. Presently serving as Chairman Group Committee of Kondajji Basappa Scout Group, Hombegowda Nagar.

He served as Quarter Master in several Camps at the District, State and the National Levels including Jamborette and Jamboree. He attended many Camps along with his Scouts at the District, State and National Levels. He was awarded the Medal of Merit of the Bharat Scouts and Guides for his meritorious services rendered to the Movement. He served as a Teacher for more than 33 years in the Maruthi Vidyalaya, Hombegowda Nagar, Bangalore.

He served a few Social Service Organizations and rendered Community Services. May his soul Rest in Peace

..............ಹಿಂದಿನ ಸಂಚಿಕೆಯಿಂದ

ಅಧ್ಯಾಯ – 2 **ಕಾರ್ಯಸರಣಿ** ಶಿಬಿರಾಗ್ನಿ ಉದಂತ ಸಂ – 7

## ಸಂಕೇತಗಳು ಮತ್ತು ಆದೇಶಗಳು

### ಗುಪ್ತವಾಗಿ ಸಮಾಚಾರವನ್ನು ಮುಟ್ಟಿಸುವುದು – ಸಾಂಕೇತಿಕ ಬೆಂಕಿ

### ಶಬ್ದ ಸಂಕೇತಗಳು – ಆದೇಶ ಪದಗಳು – ಸಿಳ್ಳೆ ಮತ್ತು ಬಾವುಟ ಸಂಕೇತಗಳು

**ಸಂಕೇತ ಕ್ರಮ**

ಸಂಕೇತ ಕ್ರಮವನ್ನು ತಿಳಿದಿರುವುದು ಲಾಭದಾಯಕವಾಗಿರುತ್ತದೆ. ರಸ್ತೆಯ ಎದುರು ಬದಿಯ ನಿಮ್ಮ ಮಿತ್ರನೊಡನೆ ಸಂಕೇತಗಳ ಮೂಲಕ ಮಾತನಾಡುತ್ತಿದ್ದರೆ. ನಿಮ್ಮ ಹಾವಭಾವಗಳು, ನೋಡುವವರಿಗೆ, ಏನೂ ಅರ್ಥವಾಗದೆ ಬಹಳ ಸೋಜಿಗವಾಗಿ ಕಾಣುತ್ತವೆ. ಈ ರೀತಿಯಲ್ಲಿ ಪರಸ್ಪರ ವ್ಯವಹರಿಸುವುದು. ಕಗ್ಗಾಡು ಪ್ರದೇಶಗಳಲ್ಲಿ, ನಿಜವಾಗಿ ಅಮೂಲ್ಯವಾದುದೆಂಬುದನ್ನು ನಾನು ಕಂಡುಕೊಂಡೆ. ಒಮ್ಮೆ ನಾವು ಬೇರೆ ಬೇರೆ ಪರ್ವತಗಳ ಮೇಲೆ ಇದ್ದೆವು. ಇನ್ನೊಮ್ಮೆ ಅಗಲವಾದ ನದಿಯ ಎದುರು ಬದಿರು ದಡಗಳಲ್ಲಿದ್ದೆವು. ಈ ಎರಡೂ ಸಮಯಗಳಲ್ಲಿ, ನಮ್ಮಲ್ಲೊಬ್ಬರಿಗೆ ಮುಖ್ಯವಾದ ಸಮಾಚಾರವನ್ನು ಕಳುಹಿಸುವ ಅವಶ್ಯಕತೆ ಏರ್ಪಟ್ಟಿತ್ತು.

**ಬೆಂಕಿಯ ಸಂಕೇತಗಳು**

ಎಲ್ಲ ದೇಶಗಳ ಸ್ಕೌಟುಗಳೂ, ಬೆಂಕಿಯನ್ನು ಸಂಕೇತ ಕಳುಹಿಸಲು ಉಪಯೋಗಿಸುತ್ತಾರೆ. ಹಗಲು ವೇಳೆ ಬೆಂಕಿಯ ಹೊಗೆಯೂ, ರಾತ್ರಿಯ ಹೊತ್ತು ಬೆಂಕಿಯ ಜ್ವಾಲೆಯೂ ಉಪಯೋಗಕ್ಕೆ ಬರುತ್ತವೆ.

**ಹೊಗೆಯ ಸಂಕೇತಗಳು :** ದೊಡ್ಡ ಗಾತ್ರದ ಬಗೆಯ ಉರವು, ಮೇಲೆ ಮೇಲೆ ಮೂರು ಬಾರಿ ನಿಧಾನವಾದ ಗತಿಯಲ್ಲಿ ಕಂಡು ಬಂದರೆ, ಅದು ಅಪಾಯವನ್ನು ಸೂಚಿಸುತ್ತದೆ. ಏಕ ಗತಿಯಲ್ಲಿ ಬಿಟ್ಟುಬಿಟ್ಟು ಸಣ್ಣ ಸಣ್ಣದಾದ ಉರುವು ಕಂಡು ಬಂದರೆ "ಎಲ್ಲರೂ ಬನ್ನಿ, ಇಲ್ಲಿ ಒಟ್ಟು ಸೇರಿ" ಎಂದರ್ಥ. ಏಕಧಾರೆಯಾಗಿ ಬಿಟ್ಟಹೊಗೆಯು "ನಿಲ್ಲಿ" ಎಂದು ಸೂಚಿಸುತ್ತದೆ.

ಬೆಂಕಿಯ ಹೊಗೆಯನ್ನುಂಟುಮಾಡಲು, ನೀವು ಸಾಮಾನ್ಯವಾಗಿ ಹೊತ್ತಿರುವ ರೀತಿಯಲ್ಲಿ ಒಣಗಿದ ಪುರುಳೆ, ಕಡ್ಡಿಗಳು ಮತ್ತು ಸೌದೆಯನ್ನು ಉಪಯೋಗಿಸಿ, ಬೆಂಕಿಯನ್ನು ಜ್ವಲಿಸಿ, ಅದು ಚೆನ್ನಾಗಿ ಉರಿಯಲು ಆರಂಭಿಸಿದ ಮೆಲೆ, ಪೂರಾ ಒಣಗದೆ ಇರುವ, ಸ್ವಲ್ಪ ಹಸಿಯಾಗಿರುವ ಹುಲ್ಲು, ಎಲೆಗಳು, ಇತ್ಯಾದಿ ಅದಕ್ಕೆ ಹಾಕಿ ಹೊಗೆಯಾಡುವಂತೆ ಮಾಡಬೇಕು.

ಈಗ ಒದ್ದೆಯಿರುವ ಛದ್ದರದಿಂದ ಬೆಂಕಿಯನ್ನು ಮುಚ್ಚಿ, ಛದ್ದರವನ್ನು ಮೇಲೆತ್ತಿದರೆ ಬೆಂಕಿಯು ಚಿಮ್ಮುತ್ತದೆ. ಕೂಡಲೇ ಮುಚ್ಚಿ. ಹೊಗೆಯ ಗಾತ್ರವೂ, ಚಿಮ್ಮುವ ರೀತಿಯೂ, ನೀವು ಛದ್ದರವನ್ನು ತೆಗೆಯುವುದರ ಮತ್ತು ಮುಚ್ಚುವುದರ ಮೆಲೆ ಅವಲಂಬಿಸಿರುತ್ತದೆ. ಸಣ್ಣ ಗಾತ್ರದ ಹೊಗೆಗೆ, ಛದ್ದರವನ್ನು ಮೇಲೆತ್ತಿ ಒಂದು, ಎರಡು, ಎಣಿಸಿ ಮುಚ್ಚಿಬಿಡಿ. ದಪ್ಪಗಾತ್ರದ ಹೊಗೆಗೆ ಎಂಟರ ವರೆಗೂ ಎಣಿಸಿ ಮುಚ್ಚಿ, ಎರಡು ಚಿಮ್ಮುವಿಕೆಗಳ ಮಧ್ಯೆ ನಿಯತಕಾಲವನ್ನು ಅನುಸರಿಸಬೇಕು. ಏಕಧಾರೆಯ ಹೊಗೆ ಬೇಕಾದರೆ ಸೆಕೆಂಡುಗಳ ಕಾಲ ಛದ್ದರವನ್ನು ಎತ್ತಿ ಹಿಡಿಯಬೇಕು.

**ಜ್ವಾಲೆಯ ಪ್ರಕಾಶ ಸಂಕೇತಗಳು : (Flare Signals)** ರಾತ್ರಿಯ ವೇಳೆಯಲ್ಲಿ ಹ್ರಸ್ವ, ದೀರ್ಘ ಪ್ರಕಾಶ ಕಾಲಮಿತಿಗಳು, ಹಗಲಿನ ಹೊಗೆ ಸಂಕೇತದಂತೆಯೇ ಅರ್ಥ ಮಾಡಲು ಸಹಕಾರಿ, ಆದಷ್ಟೂ ಪ್ರಕಾಶಮಾನವಾದ ಜ್ವಾಲೆಯು ಮೇಲೇರುವಂತೆ ಬೆಂಕಿಯನ್ನು ಹೊತ್ತಿಸಿ ಒಣ ಸೌದೆಯ್ನು ಉಪಯೋಗಿಸಿ ಉರಿಸಬೇಕು.



ಜ್ವಾಲೆಯ ಪ್ರಕಾಶಕ್ಕೆ ಅಡ್ಡವಾಗಿ, ಸಮಾಚಾರವನ್ನು ಓದುವವರಿಗೂ, ಬೆಂಕಿಗೂ ಮಧ್ಯೆ ಇಬ್ಬರು ಸ್ಕೌಟುಗಳು, ಛದ್ದರವನ್ನು ಅಡ್ಡಹಿಡಿದುಕೊಳ್ಳುತ್ತಾರೆ. ಇದರಿಂದ ಸಮಾಚಾರವನ್ನು ಓದಿಕೊಳ್ಳುವವರಿಗೆ, ನೀವು ಛದ್ದರವನ್ನು ಇಳಿಬಿಟ್ಟಾಗ ಮಾತ್ರ ಬೆಂಕಿಯ ಪ್ರಕಾಶವು ಕಾಣುತ್ತದೆ. ಹ್ರಸ್ವ ಪ್ರಕಾಶಕ್ಕೆ ಎರಡರವರೆಗೆ ಎಣಿಕೆ, ದೀರ್ಘ ಪ್ರಕಾಶಕ್ಕೆ 6ರ ವರೆಗೆ ಎಣಿಕೆ ಮತ್ತು ಪ್ರತಿ ಹೊಳಪಿಗೂ ಮಧ್ಯೆ 4ರ ವರೆಗೆ ಎಣಿಕೆ ಮಾಡಬೇಕಾಗುತ್ತದೆ.

**ಶಬ್ದ ಸಂಕೇತಗಳು :** ಅಮೆರಿಕಾದ ಒಳ ಯುದ್ಧ ನಡೆದಾಗ, ಕ್ಯಾಪ್ಟನ್ ಕ್ಲೌರಿ ಎಂಬುವರು (ಅವರೊಬ್ಬ ಸ್ಕೌಟ್ ಅಧಿಕಾರಿಗಳು), ಶತ್ರುಗಳು ರಾತ್ರಿಯಲ್ಲಿ, ಅನಿರೀಕ್ಷಿತವಾಗಿ ಧಾಳಿಯಿಡುವ ಬಗ್ಗೆ ತನ್ನ ಅಮಿತವಾದ ಸೈನ್ಯಕ್ಕೆ ಎಚ್ಚರಿಕೆಯನ್ನು ಕೊಡಲು ಬಯಸಿದರು. ಆದರೆ ಆಗ ಬಿರುಗಾಳಿಯಿಂದ ಕೂಡಿದ ಮಳೆ ಬೀಳುತ್ತಿತ್ತು. ಅವರಿಗೂ ಅವರ ಮಿತ್ರರಿಗೂ ಮಧ್ಯೆ ದಾಟಲಾಗದ, ಪ್ರವಾಹದಿಂದ ಕೂಡಿದ, ನದಿಯ ಅಗಾಧ ಜಲರಾಶಿಯಿದ್ದಿತು



**ನೀವೇ ಕ್ಯಾಪ್ಟನ್ ಕ್ಲೌರಿ ಆಗಿದ್ದಿದ್ದರೆ ಏನು ಮಾಡುತ್ತಿದ್ದಿರಿ?** ಆ ಅಧಿಕಾರಿಗೆ ಏನು ಮಾಡಬೇಕೆಂಬ ಬಗ್ಗೆ, ಒಂದು ಒಳ್ಳೆಯ ಉಪಾಯ ಹೊಳೆಯಿತು. ಸಮೀಪದಲ್ಲಿ, ಸುಮ್ಮನೆ ನಿಂತಿದ್ದ ಒಂದು ಹಳೆಯ ರೈಲ್ವೆ ಎಂಜಿನ್ನನ್ನು ಉಪಯೋಗಿಸಲು ನಿರ್ಧರಿಸಿದರು. ಬೆಂಕಿಹೊತ್ತಿಸಿ ಹಬೆಯನ್ನು ಉತ್ಪತ್ತಿ ಮಾಡಿದರು. ಮೋರ್ಸ್ ವರ್ಣಮಾಲೆಯನ್ನು ಉಪಯೋಗಿಸಿ, ಎಂಜಿನ್ನಿನಿಂದ ಸಣ್ಣನೆಯ ಮತ್ತು ಉದ್ದನೆಯ ಸಿಳ್ಳುಗಳನ್ನು ಹಾಕಲು ಪ್ರಾರಂಭಿಸಿದರು. ಸ್ವಲ್ಪ ಕಾಲದಲ್ಲಿಯೇ ಅವರ ಮಿತ್ರರು, ಆ ಸಂಕೇತವನ್ನು ಕೇಳಿಸಿಕೊಂಡು, ಅರ್ಥಮಾಡಿಕೊಂಡರು. ಬ್ಯೂಗಲ್ ಊದಿ ಉತ್ತರ ಕೊಟ್ಟರು, ಕೂಡಲೇ ಅಧಿಕಾರಿಯು ಎಚ್ಚರಿಕೆಯ ಸಂದೇಶವನ್ನು ನೀಡಿದರು. ಅವರು ಅದನ್ನು ಓದಿಕೊಂಡು ಅದರಂತೆ ಮಾಡಿದರು. ಆ ಮೂಲಕ ಇಪ್ಪತ್ತು ಸಹಸ್ರ ಸಂಖ್ಯೆಯ ಆ ಸೈನ್ಯವು ಶತ್ರುಗಳ ಧಾಳಿಯಿಂದ ರಕ್ಷಿಸಲ್ಪಟ್ಟಿತು.



ಆಫ್ರಿಕಾದ ಹಲವು ಬುಡಕಟ್ಟು ಜನಾಂಗಗಳು, ಪರಸ್ಪರವಾಗಿ ಡೋಲು ಬಡಿಯುವುದರ ಮೂಲಕ, ಸಂಕೇತಗಳನ್ನು ಕಳುಹಿಸುತ್ತಾರೆ.

.......................ಮುಂದುವರೆಯುತ್ತದೆ.



# The Bharat Scouts & Guides

## Rules to be Strictly Followed by the participants at the National, Regional, State & District Level Camps & Events

1) The Scout/Guide Law is the Law of the Camps/Events
2) Punctuality is the hall mark of the Camps/Events. All calls are obeyed quickly and promptly.
3) Participants are not allowed to go outside of the Camps/Events without proper permission of the Leader of the Camps/Events
4) When Uniform is to be worn, it is worn completely and correctly. It is worn during the entire training sessions and activities.
5) Visitors are allowed to meet the participants during spare time (Lunch time/ Evening time) after taking the permission from the Leader of the Camps/Events.
6) Smoking, drinking alcohol and substance like Gutkha, Tamakhu, Charas, etc. ae strictly prohited during the Camps/Events
7) All cases of accident, ill health or injury, however slight, are to be reported immediately to the Leader of the Camps/Events through the Duty Patrol Leader.
8) All case of indiscipline/hurdles and disobedience to the rules of the Camps/Events will be dealt with strictly by the Leader of the Camps/Events. He reserves the right to take suitable action against the delinquent person including expulsion from the Camps/Events immediately. Such Persons will loose their right to claim Travelling expenditures and relieving order, etc.
9) After opening the Camps/Events, nobody will be permitted to register as participant in the Camps/Events

10) The participant must have authority/recommendations of the State/District Associations at the time of reporting to the Camps/Events. Without proper recommendation letter of the concern State/District Association, permission to participate in the Camps/Events, may be denied.

11) Places meant for sanitation and bathing should only be used for such purposes.

12) Damage to the property of the Training Centres caused by indisciplined act of participants would be seriously viewed and charged by the Leader of the Camps/Events.

13) Valuable things may be deposited with Quarter Master of the Camps/Events for safety purpose.

14) Participation Certificates of the Camps/Events may be refused to participants not following the rules and are indisciplined.

15) Lights out time in the Camp must be strictly adhered to by all. Between lights out and Rouse perfect silence must be maintained.

16) In case of joint Scout/Guide Leaders Camps, Male participants will not enter the Female Tents and similarly Females will not enter the Male Tents, during the Camps/Events

| | | |
|---|---|---|
| ಸ್ಕೌಟಿಂಗ್ / ಗೈಡಿಂಗ್ | : | ಒಂದು ಆಟ, ಶಿಕ್ಷಣ ಮತ್ತು ಸಾಧನೆ |
| ಸ್ಕೌಟಿಂಗ್ / ಗೈಡಿಂಗ್ | : | ಬೇರೇನೂ ಅಲ್ಲ; ಒಂದು ಜೀವನ ವಿಧಾನ |
| ಸ್ಕೌಟಿಂಗ್ / ಗೈಡಿಂಗ್ | : | ಅದರ ಮಂತ್ರ ಸೇವೆ; ಸಹಬಾಳ್ವೆ |
| ಸ್ಕೌಟಿಂಗ್ / ಗೈಡಿಂಗ್ | : | ಅದರ ವ್ಯಾಪ್ತಿ ಇಡೀ ಜಗತ್ತು |
| ಸ್ಕೌಟಿಂಗ್ / ಗೈಡಿಂಗ್ | : | ಆತ್ಮ ವಿಶ್ವಾಸ, ಸಾಹಸ ಮತ್ತು ಉಲ್ಲಾಸ |
| ಸ್ಕೌಟಿಂಗ್ / ಗೈಡಿಂಗ್ | : | ಶಿಸ್ತು, ಸ್ವಾವಲಂಬನೆ ಮತ್ತು ದೈವಭಕ್ತಿ. |

ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide News Magazine

## Through a message of Love & Peace

Our Movement embodies a message of peace for Young People and adults all over the World. We believe in the power of love to bring about change and we extend this love to everyone regardless of their colour, language, creed, background or political views.



Peace is built by the benevolent and altruistic, those who are capable of putting their own life to the service of others. They unite their efforts as part of a mission in which everyone has a part of a mission in which everyone has a part of play. Peace is the synthesis of individual actions and an on-going challenge for us all.

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227

**ಸಂಪಾದಕ ಮಂಡಳಿ**

ಅಧ್ಯಕ್ಷರು
**ಗೊ.ರು. ಚನ್ನಬಸಪ್ಪ**

ಸಂಪಾದಕರು
**ಎಂ.ಎ. ಖಾಲಿದ್**

ಸಹ ಸಂಪಾದಕರು
**ಆರ್. ಚಂದ್ರಶೇಖರನ್**

ಉಪ ಸಂಪಾದಕರು
**ಎಂ.ಎ. ಚೆಲ್ಲಯ್ಯ**
**ಎನ್. ಶ್ರೀನಿವಾಸನ್**

ಸದಸ್ಯರು
ಎಸ್.ಕೆ. ಪ್ರಭಾ — ನಾರಾಯಣ ಶೆಟ್ಟಿ
ಗೀತಾ ನಟರಾಜ್ — ಜಾನಕಿ ವೇಣುಗೋಪಾಲ್
ಕೆ.ಕೆ. ಲೀಲಾ — ಮಾಧವ ಸಿಂಗ್
ಆಂದನೂರು ಶೋಭಾ — ಬಿ.ಎ. ರಾಜಶೇಖರ್

**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**
ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



Dr. M.T. Reju, I.A.S., Deputy Commissioner, Udupi Planting a Sapling at Dr. Shivarama Karantha Scout/Guide Training Centre, Pragathinagar, Udupi on 17th July 2011. Smt. Shantha V. Acharya, State Commissioner(G) & others are also seen.




Sri T.V. Narayana Shastry, District Chief Commissioner addressing the Scouters/ Guiders at the Conference held on 8th July 2011 at District Headquarters, Shimoga. Prof. A.S. Chandrasekhar, DC(S) and others are also seen.



Sri M.D. Wali, Taluk Physical Education Officer Inaugurated the Scouters/ Guiders Conference on 8th July 2011 at Govt. Girls High School, Badami, Bagalkot District.



Smt. Rajeshwari Krishna, District Commissioner(Guide), Dharwad, Sri B.K. Patil, DTC(Scout), Miss Prema Mangalore, DTC(G) and Smt. Shobha Shahupati, Head Mistress, Oriental Public School, Hubli are seen at the Environment Day Programme.



Sri K. Thimmaiah, District Chief Commissioner and Sri Ramanjanaya, Block Education Officer lighting the lamp at the Scouters/Guiders Conference held on 15th July 2011 at Manvi, Raichur District.



Scouts & Guides are Planting Saplings at the Govt. Higher Primary School, Huda, Raichur District.

Regd. as News Paper (Magazine) RNI No : 1087/59. Postal Regd. No CPMG/KA/BGW-549/2009-11
Permitted to Post under WPP System (No. of Pages : 4 + 20 = 24)
Vide No.: WPP-87 of SSP, Bangalore West. Posted at: Mail Business Centre, Bangalore GPO on 30-07-2011





**Sri B.S. Yeddyurappa, Hon'ble Chief Minister of Karnataka is seen with Sri Vishweshwara Hegde Kageri, Hon'ble Minister for Primary & Secondary Education, Sri S.R. Vishwanath, M.L.A., Yalahanka, Scouts, Guides & Students at the 'Shalegagi Naavu Neevu' Programme Organised by the Department of Public Instruction held on 05th July 2011 at Govt. School, Rajanukunte, Bangalore. The Hon'ble Chief Minister is having Mid Day Meal with Children of the School.**

## *S.S.L.C. Toppers April 2011*







**Kavitha. N (96.16%)**

**Shilpa. J, (96.96%)**

**Sri Sarada High School, Panemangalore Dakshina Kannada**

**Ramnath Ananth Kini U (96.32%)**

**S.L.N.P Vidyalaya, Panemangalore**



**Sri M.A. Khalid, State Secretary & Consultant, APR Scout Committee is seen with His Excellency Wu Den-Yih, Hon'ble Prime Minister of Republic of China after receiving Green Jade Lion Award in Taiwan on July 12, 2011.**



**SCOUTS**
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at : Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine